ಮಕ್ಕಳ ಮಟ್ಟದ ನೂರು ಕನ್ನಡ ನಾಟಕಗಳು

# ಷರಾಮರ್ಷಿಣಿ

ಲೇಖಕ: ಕೆ. ಬಿ. ಭಂಡಾರಿ



ಬೆಲೆ: ಎರಡು ರೂಪಾಯಿ.

ಸ್ವಾತಂತ್ರ್ಯವೀರ ಕಲ್ಯಾಣಪ್ಪ

ಬಾಜೀರಾಯ ದೇಶಪಾಂಡೆ

ಮಧುಮತಿ

ಮಕ್ಕಳ ಮಟ್ಟದ ಮೂರು ಕನ್ನಡ ಚಾರಿತ್ರಿಕ ನಾಟಕಗಳು



(ಅಭಿನಯಿಸಲು ಲೇಖಕನ ಅನುಮತಿ ಕೇಳಬೇಕಾಗಿಲ್ಲ. ನಾಟಕವನ್ನು ಸಂಕುಂಚಿತಗೊಳಿಸಲು ಯಾ ವಿಸ್ತೃತಗೊಳಿಸಲು ಲೇಖಕನ ಅಭಿಪ್ರಾಯ ಕೇಳುವುದು ಉತ್ತಮ)

ಮುದ್ರಕರು:
...ಣಿ ಪ್ರಿಂಟರ್ಸ್
...ವೆಲ್
...ನಾಡಿ
...ಗಳೂರು-575002.

ಲೇಖಕ ಮತ್ತು ಪ್ರಕಾಶಕ:
ಕೆ. ಬಿ. ಭಂಡಾರಿ
ಫಿಗ್ನೆಸ್ ಕೋಟ್ಟೇಜ್
ಬಲ್ಮಠ ಹೊಸ ರಸ್ತೆ
ಮಂಗಳೂರು-575001.

ಬೆಲೆ: ಎರಡು ರೂಪಾಯಿ.

# ಮೊದಲ ಮಾತು

ಬರಹಗಾರರ ಸಾಲಿಗೆ ಸೇರಿದವನು ನಾನಲ್ಲ. ಕೇವಲ ನಾಟಕದ ಹುಚ್ಚಿ
ಬಲಿಬಿದ್ದು; ಕೆಲವರು ಬರೆದ ಹಲವು ನಾಟಕಗಳನ್ನು ಅಭಿನಯಿಸತೊಡಗಿದಾ
"ಆ ನಾಟಕ ಹಾಗಾಗಬೇಕಿತ್ತು" "ಈ ನಾಟಕ ಹೀಗಾಗಬೇಕಿತ್ತು" ಎಂಬ ಅನಿ
ಹುಟ್ಟಿ, ಸ್ವತಹ ನಾನೇ ಕೆಲವು ನಾಟಕಗಳನ್ನು ಬರೆದೆ. ಅದನ್ನು ಅಭಿನಯಿಸಿದಾ
"ಪರವಾ ಇಲ್ಲ" ಎಂಬ ಪ್ರೇಕ್ಷಕರ ತೃಪ್ತಿ ಕಂಡು ಹಾಗೆಯೇ ಮುಂದುವರಿಸುತ್ತ
ಸುಮಾರು ನಲುವತ್ತು ನಾಟಕಗಳನ್ನು ಬರೆದೆ. ಹೆಚ್ಚಿನ ನಾಟಕಗಳು ಹಲವಾ
ಪ್ರದರ್ಶನ ಕಂಡು ಜನಪ್ರಿಯತೆ ಪಡೆದಿದ್ದರೂ ಮುದ್ರಿಸಲು ಧೈರ್ಯ ಸಾಕಾಗಲಿ
ಕಾರಣ "ಪ್ರಕಟಣಾಯೋಗ್ಯ ನಾಟಕಗಳನ್ನು ನಾನು ಬರೆದೆ"ನೆಂಬ ತೃಪ್ತಿ ನನ
ಬಂದಿಲ್ಲ. ಇತ್ತೀಚೆಗೆ ದೊಡ್ಡವರ ನಾಟಕಕ್ಕಿಂತಲೂ ಮಕ್ಕಳ ಮಟ್ಟದ ಕಿರು ನಾಟ
ಗಳ ಬೇಡಿಕೆ ಹೆಚ್ಚಾದುದರಿಂದ ಎಲ್ಲಾ ಕೇಳಿಕೆಗಳಿಗೆ ಹಸ್ತಪ್ರತಿ ಒದಗಿಸಲಾರದೆ
ತಪ್ಪಾದರೆ ತಪ್ಪು-ಒಪ್ಪಾದರೆ ಒಪ್ಪು-ಮುದ್ರಿಸಿಯೇ ಬಿಡುವುದು ಎಂಬ ಒಣಧೈರ್ಯ
ದಿಂದ ಈ ನಾಟಕಗಳು ಪ್ರಕಟಿಸಲ್ಪಟ್ಟವು. ಪಾಂಡಿತ್ಯ ಸಾಲದೆ ಉಳಿದ ವ್ಯಾಕರ
ದೋಷಗಳಿರಬಹುದು. ವ್ಯವಹಾರದ ಆಡುಭಾಷೆಯ ಉಪಯೋಗ ನಾಟಕ
ವಾಸ್ತವಿಕತೆಗೆ ಸಹಾಯಕವಾದುದರಿಂದ ತಿಳಿದೂ ಕೆಲವು ವ್ಯಾಕರಣ ತಪ್ಪುಗಳನ್ನ
ಬಿಡಲಾಗಿದೆ. "ಮಕ್ಕಳ ನಾಟಕ"ವೆಂದಾದರೂ, ಪ್ರಾಥಮಿಕ ಶಾಲಾ ಪ
ಪುಸ್ತಕದ ಶೈಲಿಯಲ್ಲಿ ಬರೆದರೆ ಅದು ನಾಟಕವೆಂದಾಗದು—ಶೈಲಿಯಲ್ಲಿ ತು
ಬಿಗುಪು ಇದ್ದರೆ, ಮಕ್ಕಳ ಉಚ್ಚಾರ—ವಾಕ್ಚಾತುರ್ಯಗಳ ಬೆಳವಣಿಗೆಗೆ ಸಹಕ
ಯಾದೀತು" ಎಂಬ ಹಿರಿಯ ಅಧ್ಯಾಪಕರೋರ್ವರ ಸಲಹೆ ಮೇರೆಗೆ, ಶೈಲಿಯನ
ತುಸು ಬಿಗುಪುಗೊಳಿಸಿದೆ.

ಕಾಗದದ ಅಭಾವ ಮತ್ತು ಬೆಲೆ ಏರಿಕೆಯ ಈ ಕಾಲದಲ್ಲೂ ಆರ್ಥಿಕ ಒತ್ತ
ಹೇರದೆ, ಹೇಳಿದೊಡನೆ ಅಂದವಾಗಿ ಮುದ್ರಿಸಿಕೊಟ್ಟ "ತ್ರಿವೇಣಿ ಪ್ರಿಂಟರ್ಸ್"
ಮ್ಯಾನೇಜರ್/ಮಾಲಕ ಶ್ರೀ ಕೆ. ಗಂಗಾಧರರವರ ಪ್ರೋತ್ಸಾಹವೇ ನನ್ನ ಹಲವು ನಾಟಕಗ
ಪ್ರಕಟಿಸಲ್ಪಡಲು ಮುಖ್ಯ ಕಾರಣ. ಅವರಿಗೂ ಮುದ್ರಣಾಲಯದ ನೌಕರರಿಗ
ಕೃತಜ್ಞನಾಗಿದ್ದೇನೆ. ಮಕ್ಕಳ ಅಭಿನಯಕ್ಕೆ ತಕ್ಕುದಾಗಿ ಪ್ರದರ್ಶಿಸಲ್ಪಟ್ಟರೆ ನ
ಶ್ರಮ ಸಾರ್ಥಕ.

—ಲೇಖ

## ಅರ್ಪಣೆ

ಮಾತಾಪಿತೃ ಸೇವೆಯನ್ನು ಕಡೆಗಣಿಸಿ, ನಾಟಕದ
ಹುಚ್ಚಿಗೆ ಬಲಿಯಾದ ನನ್ನಲ್ಲಿ ಒಮ್ಮೆಯೂ ಕೋಪಿಸದೆ-
ಶಪಿಸದೆ, ಬದುಕುವ ದಾರಿ ಬಿಟ್ಟು, ನಾಟಕದ ಗೀಳು
ಹಿಡಿದು ಸೋತನಲ್ಲಾ ಎಂದು ಮರುಗುತ್ತಲೇ
ಕಣ್ಮರೆಯಾದ, ನನ್ನ ಮಾತಾ-ಪಿತೃಗಳಾದ

**ಬೆಳ್ಳೂರು ಪರಾರಿ ರುಕ್ಮಿಣಿ ಭಂಡಾರಿ**

ಮತ್ತು

**ಕೋಟೆಕಾರುಗುತ್ತು ರಾಮಣ್ಣ ಭಂಡಾರಿಯವರ**

ಚರಣಾರವಿಂದಗಳಲ್ಲಿ

ಈ ಕೃತಿಯನ್ನು ಭಕ್ತಿಯಿಂದ ಅರ್ಪಿಸಿದ್ದೇನೆ.

## ಸ್ವಾತಂತ್ರ್ಯವೀರ ಕಲ್ಯಾಣಪ್ಪ ನಾಟಕದ ಪಾತ್ರವರ್ಗ:

ಕಲ್ಯಾಣಪ್ಪ
ಗಂಗಮ್ಮ
ಗಿರಿಜೆ
ನಂಜಣ್ಣ
ಚೆಟ್ಟಿಕುಡಿಯ
ರಾಮಗೌಡ
ಅಣ್ಣಿಗೌಡ
ರಾಮಪ್ಪಯ್ಯ
ಕುಞ
ಲಕ್ಷ್ಮಪ್ಪ ಬಂಗರಸ
ಕರಣೀಕ ದೇವಪ್ಪಯ್ಯ
ಗವರ್ನರ್ ದೊರೆ
ಕಾಂತು
ಜವಾನರು, ಇಂಗ್ಲಿಷ್ ಸೈನಿಕರು

## ದೃಶ್ಯಗಳು:

ಕಲ್ಯಾಣಪ್ಪನ ಮನೆ
ಸುಳ್ಯದ ಕಾಡುಪ್ರದೇಶ
ರಾಮಪ್ಪಯ್ಯನ ಮನೆ
ನಂದಾವರದ ಕಾಡುಪ್ರದೇಶ
ಹಳ್ಳಿ ದಾರಿ
ಪುತ್ತೂರು ತಾಲೂಕು ಕಛೇರಿ
ಬಾವಟೆಗುಡ್ಡೆಯ ಫೇರೆ
ಬಿಕರ್ಣಕಟ್ಟೆಯ ವಧಾಸ್ಥಾನ

॥ ಓಂ ಗಣೇಶಾಯ ನಮಃ ॥

# ಸ್ವಾತಂತ್ರ್ಯವೀರ ಕಲ್ಯಾಣಪ್ಪ

## 1ನೇ ದೃಶ್ಯ— ಕಲ್ಯಾಣಪ್ಪನ ಸಾಮಾನ್ಯ ಮನೆ

[ರಾತ್ರಿ ಹೊತ್ತು. ಮನೆಯಲ್ಲಿ ದೀಪ ಉರಿಯುತ್ತಿದೆ. ಒಂದು ಬೆಂಚೂ, ಹಳೇಕಾಲದ ಒಂದೆರಡು ಕುರ್ಚಿಗಳೂ ಇವೆ. ಹೊರಗಿನಿಂದ ಬಾಗಿಲು ತಟ್ಟುವ ಶಬ್ದ ಕೇಳಿ, ಒಳಗಿನಿಂದ ಗಿರಿಜೆ ಬಂದು ಬಾಗಿಲು ತೆಗೆದಾಗ, ಕಲ್ಯಾಣಪ್ಪ, ನಂಜಣ್ಣ, ಚೆಟ್ಟಿಕುಡಿಯ ರಾಮ ಗೌಡರು ಪ್ರವೇಶಿಸುವರು. ಗಿರಿಜೆ ದೂರ ಸರಿದು ನಿಲ್ಲುತ್ತಾಳೆ]

**ಕಲ್ಯಾಣಪ್ಪ**—ಎಲ್ಲರೂ ಕುಳಿತುಕೊಳ್ಳಿ. [ಎಲ್ಲರೂ ಕುಳಿತಾಗ ಒಳಗಿನಿಂದ ಮುದಿ ತಾಯಿ ಗಂಗಮ್ಮ ಬರುತ್ತಾಳೆ]

**ಗಂಗಮ್ಮ**—ಬಂದೆಯಾ ಮಗೂ....ನಿನ್ನನ್ನು ಕಾದು ಕಾದು ಬೇಸರವಾಗಿ ಮಲಗಲೆಂದು ಒಳಗೆ ಹೋದೆ.

**ಕಲ್ಯಾ**— ಸಂಗಡಿಗರೊಡನೆ ಮಾತಾಡಿ ತುಸು ತಡವಾಯಿತವ್ವಾ.

**ಗಂಗ**—ಶಿಕಾರಿ, ಗೆಳೆಯರ ಕೂಟ, ಗರಡಿ ಸಾಧನೆಂತ ನೆವನ ಹೇಳಿ ದಿನಾಲೂ ತಡ ಮಾಡಿ ಬರುವುದು ನಿನ್ನ ಅಭ್ಯಾಸ. ಮನೆಯಲ್ಲಿ ಮುದಿತಾಯಿ, ಎಳೆ ಹೆಂಡತಿ ಇದ್ದಾಳೆಂಬ ಗೊಡವೆಯೂ ನಿನಗಿಲ್ಲ.

**ಕಲ್ಯಾ**—ಇಲ್ಲವ್ವ, ಕೆಲದಿನಗಳಲ್ಲೇ ಎಲ್ಲಾ ರಗಳೆಗಳನ್ನೂ ಮುಗಿಸಿ, ಮನೆಯಲ್ಲೇ ಇದ್ದು ಬಿಡುತ್ತೇನೆ.

**ಗಂಗ**—ಸಂಗಡಿಗರು ಯಾರು?....ನನಗೆ ಸರೀ ಕಾಣುವುದಿಲ್ಲ.

**ಕಲ್ಯಾ**—ಆ....ಇವರಾ?....ನೋಡವ್ವಾ....ಇವರು ಹುಲಿಕುಂದ ನಂಜಣ್ಣ....ನಿನಗೆ ಗೊತ್ತಿರಬೇಕು.

**ಗಂಗ**—ಏನು ಗೊತ್ತಿಲ್ಲದೆ? ನಿನ್ನ ಅಪ್ಪನೊಂದಿಗೆ ಶಿಕಾರಿಗೆ ಹೋಗಲು ಆಗಾಗ್ಗೆ ಬರುತ್ತಿದ್ದ....ಹೇಗಿದ್ದೀ ನಂಜಣ್ಣಾ?

**ನಂಜ**—ದೇವರ ದಯೆಯಿಂದ ಸುಖವಾಗಿದ್ದೇನವ್ವಾ,

**ಕಲ್ಯಾ**—ಈ ಚೆಟ್ಟಿಕುಡಿಯನ ಪರಿಚಯವಿಲ್ಲವೇನವ್ವಾ?

ಗಂಗ—ನಿನ್ನದೊಂದು ತಮಾಷೆ, ಗೊತ್ತಿಲ್ಲದೇನು? ನೀನು ಸಣ್ಣದಿರುವಾಗ ನಿನಗೆ
ಗರಡಿ ಸಾಧನೆ ಕಲಿಸಿದ್ದು ಚೆಟ್ಟಿಕುಡಿಯನೆ.

ಚೆಟ್ಟಿ—ಈಗ ನಿಮ್ಮ ಮಗ ನನಗೇ ಕಲಿಸುವಷ್ಟು ಜೋರಾಗಿದ್ದಾರೆ

ಗಂಗ—ಇರಲಪ್ಪಾ, ದೇವರ ದಯೆ, ನಿನ್ನ ಆಶೀರ್ವಾದ.

ಕಲ್ಯಾ—ಇನ್ನೊಬ್ಬರಿದ್ದಾರವ್ವಾ, ಸುಳ್ಯದವರು, ರಾಮುಗೌಡರೊಂತ ನಂಜಣ್ಣ
ನಲ್ಲಿಗೆ ಅತಿಥಿಗಳಾಗಿ ಬಂದವರು.

ಗಂಗ— ಹೌದಾ....ಒಳ್ಳೆಯದು. ಗಿರಿಜಾ....ಅತಿಥಿಗಳಿಗೆ ಊಟಕ್ಕೆ ಸಿದ್ಧಮಾಡು.

ಕಲ್ಯಾ—ಬೇಡವ್ವಾ, ನಾವೆಲ್ಲ ನಂಜಣ್ಣನ ಮನೆಯಲ್ಲಿ ಊಟ ತೀರಿಸಿ ಬಂದೆವು.

ನಂಜ—ಹೌದವ್ವಾ, ಒಟ್ಟಿಗೆ ಶಿಕಾರಿಗೆ ಹೋಗಿ ಕಾಡುಹಂದಿ ಹೊಡೆದಿದ್ದೆವು.
ಹಾಗೆ ಎಲ್ಲರೂ ನಮ್ಮ ಮನೆಯಲ್ಲೇ ಉಂಡರು. ನಿನ್ನಲ್ಲಿ ಸ್ವಲ್ಪ ಮಾತಾಡ
ಬೇಕೂಂತ ಇಲ್ಲಿ ಬಂದೆವು.

ಗಂಗ—ನನ್ನಲ್ಲೇನಪ್ಪ ಮಾತು?

ಕಲ್ಯಾ—ನೋಡವ್ವಾ ಎರಡು ವರ್ಷಗಳ ಹಿಂದೆ ನಮ್ಮ ದೊರೆ ವೀರರಾಜೇಂದ್ರರೇ
ಕೊಡಗನ್ನು ಆಳುತ್ತಿದ್ದರು.

ಗಂಗ—ಹೌದು....ಬಂಗಾರದಂಥ ಮನುಷ್ಯ....ವಿಧಿ ಅವರನ್ನು ಕೊಂಡ್ಯೊದಿತು.

ಕಲ್ಯಾ—ವಿಧಿಯಲ್ಲವ್ವಾ....ಆ ಬಿಳಿತೊಗಲಿನ ಇಂಗ್ಲೀಷರು ಮೋಸದಿಂದ ಅವರನ್ನು
ಸೋಲಿಸಿದರು.

ಗಂಗ—ಆ ನೀಚರೂ ಪಾಪದ ಫಲ ಉಣ್ಣಲಿಕ್ಕಿದೆ.

ಕಲ್ಯಾ—ಅವರ ಅನ್ಯಾಯಕ್ಕೆ ಶಿಕ್ಷೆ ನೀಡಲು ನಾವೇ ಯೋಚಿಸಿದ್ದೇವೆ. ಅವ್ವಾ
ನಾವು ಕೊಡಗಿನ ಹಲವು ವೀರರು ಕೂಡಿ ಸಣ್ಣ ಸೈನ್ಯ ಕಟ್ಟಿದ್ದೇವೆ. ಸುಳ್ಯದ
ಈ ರಾಮುಗೌಡರೂ ಇನ್ನೂರು ಜನರೊಂದಿಗೆ ಸಹಾಯ ಮಾಡುತ್ತಾರೆ.
ಇಂಗ್ಲಿಷರ ವಿರುದ್ಧ ನಾವು ಯುದ್ಧ ಹೂಡುತ್ತೇವೆ.

ಗಂಗ—ಅಯ್ಯೋ ಮಗಾ! ಆ ಶಕ್ತಿವಂತರೆದುರಲ್ಲಿ ನಿಮ್ಮ ಹುಡುಗಾಟದ ಯುದ್ಧವೇ?

ಕಲ್ಯಾ--ಹುಡುಗಾಟವೆಂದಿರಾ? ಛಿ! ಹುಲಿಕರಡಿಗಳೊಂದಿಗೆ ಆಯುಧವಿಲ್ಲದೆ ಹೋರಾ
ಡಿದ ನಂಜಣ್ಣ, ಹಾರುವ ಹಕ್ಕಿಗೂ. ಓಡುವ ಜಿಂಕೆಗೂ ಗುರಿ ಇಟ್ಟು ಹೊಡೆ
ದುರುಳಿಸಿದ ಈ ಚೆಟ್ಟಿಕುಡಿಯ, ಸುಳ್ಯ ಮಾಗಣೆಯಲ್ಲೇ ಶಿಕಾರಿ ಪ್ರವೀಣ
ರೆಂದು ಹೆಸರು ಪಡೆದ ಈ ರಾಮು ಗೌಡರು, ಮದ್ದಾನೆಯನ್ನು ಹಿಡಿದು

ಪಳಗಿಸಿ ಮುದ್ದು ಆನೆಯಾಗಿ ಬದಲಿಸಿದ ಕರ್ತಕುಡಿಯ, ಕಾಡು ಹಂದಿ ಯೊಡನೆ ಖಾಡಾಖಾಡಿ ಹೋರಾಡಿದ ನಮ್ಮ ಸೋಮಣ್ಣ, ಇವರೆಲ್ಲರೊಂದಿಗೆ ನೂರಾರು ಕೊಡಗಿನ ವೀರರೂ ಸುಳ್ಯದ ಶೂರರೂ ಕೂಡಿರುವಾಗ ಬಿಳಿಯರ ಶಕ್ತಿಯೇನೂ ದೊಡ್ಡದಲ್ಲವ್ವಾ.

ನಂಜ--ಇಂತಹ ವೀರರೆಲ್ಲ ಆ ಬಿಳಿಯರ ದಾಸರಾಗಿ ಬಾಳಬೇಕೆನ್ನುತ್ತೀಯೇನವ್ವಾ?

ರಾಮು--ಅವ್ವಾ....ಆ ಬಿಳಿಯರ ಮೋಸ ನಮ್ಮೆಲ್ಲರ ರಕ್ತ ಕುದಿಸಿದೆ.

ಚಿಟ್ಟೆ--ಪರಕೀಯರ ಪ್ರಜೆಗಳಾಗಿ ಬದುಕುವುದಕ್ಕಿಂತ ಕೀಳಾದ ನರಕ ಬೇರೆ ಇದೆಯೇನವ್ವಾ?

ರಾಮು--ನಿಮ್ಮಂತಹ ನೂರಾರು ತಾಯಂದಿರು ಮಕ್ಕಳನ್ನು ಸ್ವಾತಂತ್ರ್ಯ ಸೈನ್ಯಕ್ಕೆ ಕಳುಹಿಸಿಕೊಟ್ಟಿದ್ದಾರೆ.

ಕಲ್ಯಾ--ಆ ನೂರಾರು ತಾಯಂದಿರಿಗಿಂತ ನನ್ನ ತಾಯಿ ಅಂಜುಬುರುಕಿಯೆಂದು ಗ್ರಹಿಸಿದಿರಾ ರಾಮುಗೌಡರೇ?

ಗಂಗ--ಹಾಗೇನೂ ಇಲ್ಲಪ್ಪಾ....ಇವನ ತಂದೆಯೂ ವೀರ ಸೈನಿಕರಾಗಿದ್ದು, ಒಂದು ಯುದ್ಧದಲ್ಲಿ ಸತ್ತು, ವೀರ ಸ್ವರ್ಗ ಪಡೆದರು. ಈಗ ಈ ಒಬ್ಬನೇ ಮಗನೂ ಯುದ್ಧವೆಂದೊಡನೆ ನನ್ನ ಎದೆ ನಡುಗುತ್ತದೆ.

ನಂಜ--ಆ ಅಪ್ಪನಿಂದೊದಗಿದ ದುಃಖದ ಬದಲಿಗೆ ಈ ಮಗ ದೊಡ್ಡ ಕೀರ್ತಿ ಸಂತೋಷಗಳನ್ನು ತರುತ್ತಾನೆ.

ಕಲ್ಯಾ--ಹೌದವ್ವ, ನಾವು ಮೊದಲು ಗಟ್ಟದ ಕೆಳಗಿಳಿದು ತುಳುನಾಡಿನಿಂದ ಬಿಳಿಯರನ್ನು ಓಡಿಸಿ, ಅಲ್ಲಿಯ ಜನರನ್ನೂ ಸೇರಿಸಿಕೊಂಡು ಬಂದು, ಒಂದೇ ದಿನದಲ್ಲಿ ಕೊಡಗನ್ನೂ ಸ್ವಾಧೀನ ಮಾಡುತ್ತೇವೆ.

ಗಂಗ--ಆಗಲಿ....ದೇವರು ನಿಮಗೆ ಆ ಶಕ್ತಿ ಕೊಡಲಿ. ಯಾವಾಗ ಹೊರಡುತ್ತೀರಿ?

ಕಲ್ಯಾ--ಇಂದು ಹುಣ್ಣಿಮೆ. ಶುಭದಿನ. ಇಂದೇ ರಾತ್ರಿ ಹೊರಡುತ್ತೇವೆ.

ಗಂಗ--ಆ....ಇಂದೇ ಹೊರಡುತ್ತೀರಾ?

ಚಿಟ್ಟೆ--ಹೌದವ್ವಾ....ತಡಮಾಡಿದಷ್ಟು ವೈರಿಗಳು ಬಲಿಷ್ಟರಾಗುತ್ತಾರೆ.

ಗಂಗ--ಆಗಲಿ....ನೀವೆಲ್ಲ ಒಟ್ಟಿಗಿದ್ದೀರಲ್ಲಾ....ಅದೇ ಧೈರ್ಯ.

ರಾಮು--ನಾವು ಮಾತ್ರವಲ್ಲ, ನಮ್ಮಂತಹ ನೂರಾರು ವೀರರಿದ್ದಾರೆ. ನಿಮ್ಮ ಮಗನಂತಹ ಮುಂದಾಳು ಒಬ್ಬ ನಮಗೆ ಬೇಕಿತ್ತು.

ಚೆಟ್ಟಿ--ಸ್ವಾತಂತ್ರ್ಯ ಸೇನೆಯ ಮುಂದಾಳುವಿನ ಮಾತೆಯ ವ್ವಾ ನೀನು ಸಾಮಾನ್ಯಳಲ್ಲ.

ಗಂಗ--ಆಗಲಿ. ಸಾಯುವ ಮೊದಲು ಅಷ್ಟಾದರೂ ಆದೆನಲ್ಲಾ....ಸಾಕು ಗಿರಿಜಾ ಸ್ವಾತಂತ್ರ್ಯ ಸೇನಾನಿಗಳನ್ನು ಸಂತೋಷವಾಗಿ ಬೀಳ್ಕೊಡಬೇಕು. (ಗಿರಿಜೆ ಒಳಗೆ ಹೋಗುತ್ತಾಳೆ)

ಕಲ್ಯಾ--ಅವ್ವಾ ನೀನು ಆಶೀರ್ವದಿಸಬೇಕು.
(ಬಗ್ಗಿ ಕಾಲು ಹಿಡಿವನು. ಎಲ್ಲರೂ ಕಾಲಿಗೆ ವಂದಿಸುವರು)

ಗಂಗ--ಜಯಶೀಲರಾಗಿ ಬನ್ನಿ ಮಕ್ಕಳೇ....
(ಎದ್ದು ನಿಂತಾಗ ಗಿರಿಜೆ ಆರತಿ ತರುವಳು. ಗಂಡನಿಗೆ ಆರತಿ ಎತ್ತಿ, ತಿಲಕ ವಿಟ್ಟಾಗ ಎಲ್ಲರೂ ಕೈಹಾಕಿ ತಿಲಕವಿಟ್ಟುಕೊಳ್ಳುತ್ತಾರೆ)

ಕಲ್ಯಾ--ಜೈ ಏಕಲಿಂಗೇಶ್ವರಾ....

ಎಲ್ಲರೂ--ಜೈ ಏಕಲಿಂಗೇಶ್ವರಾ?

## 2ನೇ ದೃಶ್ಯ--ಸುಳ್ಯದ ಕಾಡು ಪ್ರದೇಶ

(ಒಂದು ಕಲ್ಲಿನ ಮೇಲೆ ಅಣ್ಣಿ ಗೌಡರು ಕುಳಿತಿದ್ದಾರೆ. ದೂರದಿಂದ ಬೊಬ್ಬೆ ಹಾಕುತ್ತಾ ಕುಞ ಓಡಿ ಬರುವನು)

ಕುಞ--ಸತ್ತೆನಪ್ಪಾ ಸತ್ತೆ....ಅಯ್ಯೋ ಸತ್ತೆ (ಪ್ರವೇಶಿಸಿ) ಸತ್ತೆ ಗೌಡರೆ....ಸತ್ತೆ....
(ಮೈ ಕೊಡಹಿಕೊಳ್ಳುವನು)

ಅಣ್ಣಿ ಗೌಡ--(ಗಾಬರಿಯಿಂದ ಎದ್ದು) ಏನಾಯಿತು ಕುಞಾ?

ಕುಞ--ಸತ್ತೆನಪ್ಪಾ ಸತ್ತೆ....ಸೈಸೋದಿಲ್ಲ....ಸತ್ತೆ.

ಅಣ್ಣಿ--ಏನಾಯಿತು ಬೇಗ ಹೇಳೊ....

ಕುಞ--(ಏದುಸಿರುಬಿಡುತ್ತಾ) ಇಲ್ಲಿ ಕುಳಿತು ಬೇಸರವಾಗಿ ಅತ್ತಕಡೆ ಹೋದೆ. ಅಲ್ಲೊಂದು ರೆಂಬೆಯಲ್ಲಿ ಜೇನು ಹುಟ್ಟು ಕಂಡಿತು. ಮೆಲ್ಲ ಮರಹತ್ತಿ ಹೀಗೆ ಕೈಹಾಕಿದ್ದೇ ತಡ, ಝುಂಯ್ಯೆಂದು ಒಮ್ಮೆಲೇ ನೂರಾರು ನೊಣಗಳು ಕಚ್ಚಿದವು. ಸತ್ತೆ....ಸತ್ತೇ....

ಅಣ್ಣಿ--ಥೂ ಹೆಬಗ ಅಷ್ಟೆನಾ....? ಜೇನು ನೊಣ ಕಚ್ಚಿದರೆ ನೀನೇನೂ ಸಾಯುಲಿಕ್ಕಿಲ್ಲ. ಸುಮ್ಮನಿರು.... ಅತ್ತ ನೋಡೊ ಕೊಡಗಿನ ದಂಡಿನೊಂದಿಗೆ ನಮ್ಮ ರಾಮು ಗೌಡರು ಬರುತ್ತಿರೋದು.

ಕುಞ--(ಅತ್ತ ನೋಡಿ) ಯೋ ದೇವರೇ.... ಗೌಡ್ರೇ ತುಂಬಾ ಜನ ಇದ್ದಾರೆ. ಒಹೊ ಹೊ ಹೊ.... ಕೆಲವರಲ್ಲಿ ಕೋವಿ, ಕೆಲವರ ಕೈಯಲ್ಲಿ ಕತ್ತಿ! ದೊಣ್ಣೆ! ಬಡಿಗೆ! ಬೆತ್ತ! ಛೆ! ಛೆ! ಛೆ! ನಾನು ಓಡುತ್ತೇನೆ.

ಅಣ್ಣಿ--ನಿಲ್ಲೋ....ಅವರು ನಮ್ಮನ್ನು ಏನೂ ಮಾಡೋದಿಲ್ಲ. ನಾವೂ 200 ಜನ ಅವರೊಂದಿಗೆ ಕೂಡಿಕೊಂಡು ಇಂಗ್ಲಿಷರನ್ನು ಓಡಿಸುತ್ತೇವೆ.

ಕುಞ--ಇಂಗ್ಲಿಷರು ಓಡದಿದ್ದರೆ ಸಾವೇ ಓಡೋದಾ?

ಅಣ್ಣಿ--ಥೂ ಮಂಗ, ಸತ್ತರೂ ಓಡಲಾರೆವು.

(ಕಲ್ಯಾಣಪ್ಪ, ನಂಜಣ್ಣ, ಚೆಟ್ಟ, ರಾಮು ಗೌಡರು ಬರುವರು. ಅಣ್ಣಿ ಗೌಡರು ವಂದಿಸುವರು. ಎಲ್ಲರೂ ಪ್ರತಿವಂದಿಸುವರು)

ರಾಮು--ಅಣ್ಣಿ ಗೌಡರೇ....ಇವರೇ ಕಲ್ಯಾಣಪ್ಪನವರು. ಸೇನೆಯ ಮುಂದಾಳು. ಇವರು ಹುಲಿಕುಂದ ನಂಜಣ್ಣ. ಇವ ಚೆಟ್ಟ ಕುಡಿಯ....ಮತ್ತೆ (ಬದಿಗೆ ಬೆರಳು ತೋರಿಸಿ) ಅಲ್ಲಿ ಮರದ ನೆರಳಲ್ಲಿ ಕುಳಿತವರಲ್ಲಿ ಆ ದೊಡ್ಡ ಮೀಸೆ ಯುವರು ಕೆಂಚಪ್ಪ. ಕೆಂಪು ಮುಂಡಾಸಿನವ ಕರ್ತಕುಡಿಯ. ಹಸುರು ಶಾಲಿನವರು ಸೋಮಣ್ಣ. ಇವರೆಲ್ಲ ಮುಖಂಡರು. ಇತರ ಎಲ್ಲರೂ ವೀರ ಯೋಧರು.

ನಂಜ--(ಅಣ್ಣಿ ಗೌಡರನ್ನು ತೋರಿಸಿ) ಈ ಗೌಡರು?

ರಾಮು--ಇವರೇ ಕರಡಿಮಲೆ ಅಣ್ಣಿ ಗೌಡರು ಶಿಕಾರಿ ಪ್ರವೀಣ. ಸುಳ್ಯದೂರಲ್ಲಿ ಜನಪ್ರಿಯ ವ್ಯಕ್ತಿ.

ಕಲ್ಯಾ--ಅವರನ್ನು ಕಂಡಾಗಲೇ ಸಾತ್ವಿಕರೂಂತ ಗೊತ್ತಾಗುತ್ತದೆ.

ರಾಮು--ನಮ್ಮಲ್ಲಿ ಯಾರೆಲ್ಲ ಬಂದಿದ್ದಾರೆ ಗೌಡರೇ....?

ಅಣ್ಣಿ--ಬೋಳುತಲೆ ಬೊಮ್ಮಯ್ಯ, ಕೊಂಬುಮೀಸೆ ಕಾಂತು ಶೆಟ್ಟರು, ಗುಂಡಿಮನೆ ಗಂಗಪ್ಪ, ಸುಕ್ಕಣ್ಣ, ಸಾಂತು ಸಪಲ್ಯ, ನಾರ್ಣ ಮೂಲ್ಯ, ಮುಂಡ, ಬೈರ. ಒಟ್ಟು 240 ಜನ ಬಂದಿದ್ದಾರೆ.

ನಂಜ--ಓಹೋ ನಿಮ್ಮ ತಯಾರಿ ಬಹಳ ದೊಡ್ಡದಿದೆ. ಹಾಗಾದರೆ ನಮ್ಮ ಕೆಲ
ವೇನೂ ಕಷ್ಟವಾಗದು.

ಕಲ್ಯಾ--ರಾಮ ಗೌಡರೇ ಇಲ್ಲಿಂದಲೇ ಕಾರ್ಯಾರಂಭ ಮಾಡುವುದು. ಮೊದಲ
ತಾಲೂಕು ಕಚೇರಿ ಸ್ವಾಧೀನಪಡಿಸುವುದು.

ರಾಮ--ಅದಕ್ಕೆ ಇಷ್ಟು ಜನ ಬೇಕಿಲ್ಲ. ಕೆಲವರು ಬೆಳ್ಳಾರೆ ಕಚೇರಿಗೂ, ಕೆಲವರ
ಪಂಜದ ಕಚೇರಿ ಸ್ವಾಧೀನಕ್ಕೂ ಹೋಗಬಹುದು. ಈ ಮೂರು ಕಚೇ
ಗಳಲ್ಲೂ ಬಿಳಿಯರ ಸೈನ್ಯವೇನೂ ಇಲ್ಲ.

ಅಣ್ಣಿ--ಆದರೆ ಮಾಳಿಗೆಮನೆ ರಾಮಪ್ಪಯ್ಯನವರು ದಂಡು ಬರುವ ಸುದ್ದಿ ಕೇ
ಸಿಡಿದೆದ್ದಿದ್ದಾರೆ.

ಕಲ್ಯಾ--ಅದೇನು ಅವರಿಗಷ್ಟು ಕೋಪ?

ಅಣ್ಣಿ--ಅವರು ಬಿಳಿಯರ ಆಡಳಿತ ಪ್ರೇಮಿಗಳು. ಅಲ್ಲದೆ ಮೂರು ಗ್ರಾಮಗ
ಪಟೇಲರು. "ಕೊಡಗಿನ ದಂಡು ಬಂದರೆ ಕಂಡಲ್ಲಿ ಗುಂಡಿಕ್ಕಿ ಒಂದೇ ಹೊಂ
ದಲ್ಲಿ ಹುಗಿಸಿಯೇನು" ಅನ್ನುತ್ತಾರೆ.

ಚೆಟ್ಟಿ--ಗುಂಡು ಅವರಲ್ಲೇ ಇರೋದಲ್ಲ ನಮ್ಮಲ್ಲೂ ಇದೆ. ಅವರ ಬೊಬ್ಬೆ
ಮಣ್ಣು ಹಾಕಿತು. ನಾವು ಮುಂದುವರಿಯೋಣ.

ಕಲ್ಯಾ--ಹೌದು, ನಂಜಣ್ಣಾ 50 ಜನರೊಂದಿಗೆ ಹೋಗಿ ಬೆಳ್ಳಾರೆ ಕಚೇರಿ ಸ್ವಾಧೀ
ಮಾಡಿ. ಚೆಟ್ಟಿಕುಡಿಯ 50 ಜನರೊಂದಿಗೆ ಪಂಜದ ಕಚೇರಿಗೆ ಹೋಗು
ನಾನೂ ರಾಮ ಗೌಡರೂ ಸುಳ್ಯದ ಕಚೇರಿ ನೋಡುತ್ತೇವೆ. ಊರವರಿ
ಯಾರಿಗೂ ಉಪದ್ರಕೊಡಬೇಡಿ.

ಅಣ್ಣಿ--ನಮ್ಮವರಿಗೆ ಎಲ್ಲರಿಗೂ ಆಯುಧಗಳಿಲ್ಲ. ಕೆಲವರಲ್ಲಿ ಮಾತ್ರ ಕತ್ತಿ
ಕೋವಿಗಳಿವೆ.

ಕಲ್ಯಾ--ಉಳಿದವರಿಗೆ ತಾಳೆಮರದ ಕೊತ್ತಳಿಗೆ ಕಡಿಸಿಕೊಡಿರಿ. ಕೂಡಲೆ
ಕಾರ್ಯಾರಂಭಿಸೋಣ. ಏಳಿ. (ಎದ್ದು ನಿಂತು) ಸ್ವಾತಂತ್ರ್ಯಸೇನೆ
ಜಯವಾಗಲಿ.

ಎಲ್ಲರೂ--ಸ್ವಾತಂತ್ರ್ಯಸೇನೆಗೆ ಜಯವಾಗಲಿ.
(ಘೋಷಣೆ ಹಾಕುತ್ತಲೇ ಸಾಗುತ್ತಾರೆ)

---

## 3ನೇ ದೃಶ್ಯ—ರಾಮಪ್ಪಯ್ಯನ ಮನೆ.

(ರಾಮಪ್ಪಯ್ಯ ಕುಳಿತು ಹರಿವಾಣದಿಂದ ವೀಳ್ಯ ತೆಗೆಯುತ್ತಾ)

ರಾಮಪ್ಪಯ್ಯ--ಲೋ ಶಾಂತೋ... ಆ ಕುಞ ಇನ್ನೂ ಬರಲಿಲ್ಲವಾ?

ಶಾಂತು--(ಹೊರಗಿನಿಂದ) ಬಂದಿದ್ದಾನೆ, ಇಲ್ಲಿ ಅಂಗಳದಲ್ಲಿದ್ದಾನೆ.

ರಾಮು--ಅಂಗಳದಲ್ಲಿ ನಿಂತದ್ದೇನು, ಆಟಕಳಂಜನೇ? ಒಳಗೆ ಕಳಿಸು. (ಎದ್ದು ಒಳಗೆ ಹೋಗುತ್ತಾರೆ. ಕುಞ ಹೆದರುತ್ತಾ ಬಂದು ಬದಿಯಲ್ಲಿದ್ದ ಮಣೆಯಲ್ಲಿ ಕುಳಿತುಕೊಳ್ಳುತ್ತಾನೆ. ರಾಮಪ್ಪಯ್ಯ ಒಳಗಿನಿಂದ ಅಡಕೆ ಹಿಡಕೊಂಡು ಬಂದು)

ರಾಮು--ಬಂದೊಡನೆ ಕುಳಿತದ್ದೇನು ಮಂಗಾ...ಅತ್ತೆ ಮನೆಗೆ ಬಂದದ್ದಾ ನೀನು? (ಕುಞ ಹೆದರಿ ನಿಲ್ಲುತ್ತಾನೆ)

ರಾಮು--ಈ ಅಡಕೆ ಸುಲಿದುಕೊಡು. (ಕುಞ ಅಡಕೆ ಸುಲಿಯುತ್ತಿದ್ದಾಗ) ನೀನು ನಿನ್ನೆ ರಾಮು ಗೌಡನಲ್ಲಿಗೆ ಹೋಗಿದ್ದೀಯಾ?

ಕುಞ--ಏ...ಇಲ್ಲ...ನಾನೆಲ್ಲಿಯೂ ಹೋಗಿಲ್ಲ.

ರಾಮು--(ಎದ್ದು) ಸುಳ್ಳು ಬೊಗಳುತ್ತೀಯಾ? ಸೊಂಟ ಮುರಿದೇನು.

ಕುಞ--(ಹೆದರಿ) ಇದೂ...ಇದೂ ಹೌದು. ಒಂದು ಗಳಿಗೆ ಹೋಗಿದ್ದೆ.

ರಾಮು--ಯಾಕೆ ಹೋದೆ?

ಕುಞ--ಅಲ್ಲೇನೋ ದೊಡ್ಡ ಗದ್ದಲವಿದ್ದಂತೆ ಕಂಡಿತು. ಹಾಗೆ...

ರಾಮು--ಏನು ಗದ್ದಲ ಅಲ್ಲಿ?

ಕುಞ--ಏ... ಅಲ್ಲೇನೂ ಅಂತಹ ವಿಶೇಷವಿರಲಿಲ್ಲ.

ರಾಮು--ಏನು ತಡವರಿಸುತ್ತಿ? ಬಾಯಿ ಬಿಡಿಸಬೇಕಾ? (ಎದ್ದು ಬೆತ್ತ ಹುಡುಕುವಂತೆ ಒಳಗೆ ಹೋಗುತ್ತಿದ್ದಾಗ)

ಕುಞ--ದಮ್ಮಯ್ಯ ಹೇಳ್ತೇನೆ. ಬನ್ನಿ ಸ್ವಾಮೀ, ಹೇಳ್ತೇನೆ.

ರಾಮು--ಹಾಗೆ ಬೊಗಳು. ನೀನು ಬಿಡು, ಹುಲಿ ಹುಲಿಯನ್ನೂ ಬಾಯಿ ಬಿಡಿಸಿಯೇನು ಹೆಬಗ. ಹೇಳು.

ಕುಞ--ತುಳುನಾಡನ್ನು ಬಿಳಿಯರ ಅಧಿಕಾರದಿಂದ ತಪ್ಪಿಸಲು ಕೊಡಗಿನ ದಂಡು ಬಂದಿದೆ. ಅವರಿಗೆಲ್ಲ ರಾಮು ಗೌಡರಲ್ಲಿ ವಸತಿ, ಊಟ.

ರಾಮು--ನೀನೂ ಮುಕ್ಕಿದೆಯೂ ಆ ರಾಮ ಗೌಡನ ಅನ್ನವನ್ನು?

ಕುಞ--ಥೂ... ನಾನು ಗೌಡರ ಅನ್ನ ತಿನ್ನಲು ಹುಚ್ಚೇ ನನಗೆ? ಹೀಗೆ ಹೋದಾ
ರಾಮ ಗೌಡರು ಕರೆದು, "ಕುಞಾ ಪಾಯಸಕ್ಕೆ ಉಪ್ಪು ಸಾಕೊ ನೋಡು
ಅಂತ ಹೇಳಿದರು. ಹಾಗೆ ಒಂದು ಹತ್ತಿಪ್ಪತ್ತು ಸೌಟು ಪಾಯಸ ತಿಂದೆ.

ರಾಮು--ನೀನು ನಾಯಿಯಂತೆ ಯಾರ ಎಂಜಲನ್ನೂ ತಿನ್ನುತ್ತಿ. ನಿನ್ನನ್ನು
ತಿನ್ನಿಸುತ್ತೇನೆ.

ಕುಞ—ಅಲ್ಲ...ಅದೂ...ರಾಮ ಗೌಡರೂ...

ರಾಮು--ಅವನನ್ನೂ ನೋಡುತ್ತೇನೆ. ಆ ಕೊಡಗಿನ ದಂಡಿನವರನ್ನೂ ನೋಡು
ತ್ತೇನೆ. ಅವರು ಪುಳ್ಳದ ಪೇಟೆಗೆ ಕಾಲಿಟ್ಟರೆ ಕಂಡಲ್ಲಿ ಕಲ್ಲುಹೊಡೆದು
ಓಡಿಸಬೇಕೆಂದು ಇನ್ನೂರು ಜನ ಕಳುಹಿಸಿದ್ದೇನೆ.

ಕುಞ—ಆ... ಹೇಳಿದ ಹಾಗೆ ನಿಮ್ಮ ಸುದ್ದಿಯೂ ನಿನ್ನೆ ಬಂತು.

ರಾಮು--ನನ್ನ ಸುದ್ದಿಯಾ? ಏನದು?

ಕುಞ—"ರಾಮಪ್ಪಯ್ಯನವರು ದೊಡ್ಡ ಕಾರುಭಾರಿ" ಎಂದು ರಾಮ ಗೌಡರು
ಹೇಳಿದಾಗ ಕೊಡಗರಲ್ಲೊಬ್ಬ ದೊಡ್ಡ ಮೀಸೆಯುವ ಮೀಸೆಗೆ ಕೈಹಾಕಿದ.

ರಾಮು--ಮೀಸೆ ನಾಯಿಗೂ ಇದೆ. ಅವನಿಗೇನು ಹೆಚ್ಚು? ಅವನೇನು ಬಗುಳಿದ
ಅದನ್ನು ಹೇಳು.

ಕುಞ—ನಮ್ಮ ದಾರಿಗೆ ಅಡ್ಡ ಬಂದರೆ ರಾಮಪ್ಪಯ್ಯನಾಗಲೀ ದೂಮಪ್ಪಯ್ಯ
ನಾಗಲಿ...ಒಂದೇ ಗುಂಡಿನಿಂದ...

ರಾಮು--ಮುಚ್ಚೋ ಬಾಯಿ. ಅಷ್ಟು ಮುಂದುವರಿದನೇ ಆ ಕಳ್ಳ? ಯಾರವನೆಂದು
ನನಗೊಮ್ಮೆ ನೋಡಬೇಕು. (ಎದ್ದು ಕೋವಿ ಹಿಡಕೊಂಡು) ಬಾ
ನನ್ನೊಂದಿಗೆ.

ಕುಞ—ನಾ...ನಾ ನಾನು ಯಾಕೆ? ನನಗೆ ಸ್ವಲ್ಪ ಕೆಲಸವಿದೆ.

ರಾಮು--ನನ್ನ ಒಟ್ಟಿಗೆ ಬರಲೂ ಹೆದರಿಕೆಯಾ ಹೇಡಿ. ಬಾ... ಇಗೋ ಕೋವಿ
ಹಿಡಿದುಕೊ.

ಕುಞ—ಕೊ...ಕೊ ಕೋವಿ ಹಿಡಿಯಲು ನನಗೆ ಸರಿಯಾಗದು. ಅದು ದಾರಿಯಲ್ಲಿ
ಡಮ್ಮ ಆದರೆ...

ರಾಮು—ಏನೂ ಆಗಲಿಕ್ಕಿಲ್ಲ. ಹೊರಡು ಬೇಗ.

(ರಾಮಪ್ಪಯ್ಯ ಹೊರಡುವರು. ಕುಞ ಹೆದರಿ ನಡುಗುವ ಕೈಗಳಿಂದ
ಕೋವಿ ಹಿಡಕೊಂಡು ರಾಮಪ್ಪಯ್ಯನ ಹಿಂದೆ ಸಾಗುವನು)

---

## 4ನೇ ದೃಶ್ಯ--ಕಾಡು ಪ್ರದೇಶ

[ಕಲ್ಯಾಣಪ್ಪ, ರಾಮುಗೌಡ, ಅಣ್ಣಿಗೌಡರು ಬರುತ್ತಾರೆ]

**ಕಲ್ಯಾ**—ಇಷ್ಟು ಸುಲಭದಲ್ಲಿ ಸುಳ್ಯದ ತಾಲೂಕು ಕಚೇರಿ ನಮ್ಮ ಸ್ವಾಧೀನ ಬಂದೀತೆಂದು ನಾನು ಗ್ರಹಿಸಲೇ ಇಲ್ಲ.

**ಅಣ್ಣಿ**—ಅಂದರೆ, ನಮ್ಮ ದಂಡು ಬರುವ ಸುದ್ದಿ ಕೇಳಿಯೇ ಕಾವಲಿನ ಜವಾನರು ಹೆದರಿ ಓಡಿದ್ದಾರೆ.

**ರಾಮು**--ಆದರೂ ಖಜಾನೆಯ ಗುಮಾಸ್ತ ಸುಲಭದಲ್ಲಿ ಬಿಟ್ಟುಕೊಡಲಿಲ್ಲ. ಕೈಬೀಸಿ ನಾಲ್ಕು ಬಾರಿಸಿದಾಗಲೇ ಅವನಿಗೆ ಬುದ್ಧಿ ಬಂದುದು.

(ದಣಿದವರಂತೆ ನಂಜಣ್ಣ ಬರುತ್ತಾರೆ)

**ರಾಮು**--ಓಹೊ....ನಂಜಣ್ಣ ತುಂಬ ದಣಿದಂತಿರುವರಲ್ಲಾ.

**ನಂಜ**—ದಣಿದುದು ಬಿಸಿಲಿಗೆ ನಡೆದು—ಹೋರಾಡಿಯಲ್ಲ.

**ಕಲ್ಯಾ**—ಏನಾಯಿತು ನಂಜಣ್ಣಾ?

**ನಂಜ**--ಬೆಳ್ಳಾರೆ ಕಚೇರಿಯಲ್ಲಿ ಇಪ್ಪತ್ತೈದು ಮಂದಿ ಕಾವಲುಗಾರರಿದ್ದರು. ನಾವು ಹೋಗಿ ವಿಷಯ ವಿವರಿಸಿದಾಗ, ಗೇಲಿಮಾಡಿ ನಗಲಾರಂಭಿಸಿದರು. ನಮ್ಮ ಬೋಳುತಲೆ ಬೊಮ್ಮಯ್ಯನೂ, ಸೋಮಣ್ಣನವರೂ ನುಗ್ಗಿ ನಾಲ್ಕು ನಾಲ್ಕು ಏರಿಸಿದಾಗ, ಕಿಟಕಿ ಹಾರಿ ಪಲಾಯನ ಮಾಡಿದರು. ಕಚೇರಿಯಲ್ಲಿ ನಮ್ಮ ಬಾವುಟ ಹಾರಿಸಿ. ಕಾವಲಿರಿಸಿ, ಹಣವನ್ನೂ ಕೋವಿಗಳನ್ನೂ ಹೊರಿಸಿ ತಂದೆವು.

**ಕಲ್ಯಾ**-ನಿಮಗಿಂತಲೂ ಸುಲಭದಲ್ಲಿ ನಾವು ಸುಳ್ಯದ ಕಚೇರಿ ಸ್ವಾಧೀನ ಮಾಡಿದ್ದೇವೆ.

(ಚೆಟ್ಟಿ ಬರುವನು. ಕೈಯಲ್ಲಿ ರಕ್ತ ಸೋರುತ್ತದೆ)

**ರಾಮು**--ಅದೇನು ಚೆಟ್ಟಿಯ ಕೈಯಲ್ಲಿ ರಕ್ತ ಸೋರುತ್ತದೆ?

**ಚೆಟ್ಟಿ**—ಹೌದು, ಪಂಜದ ಕಚೇರಿಯ ಜವಾನರು ನಮ್ಮನ್ನು ದೂರದಿಂದ ಕಂಡಾಗಲೇ ಗುಂಡು ಹಾರಿಸತೊಡಗಿದರು. ಒಂದು ಗುಂಡು ಕೈಗೆ ತಗಲಿತು. ಅಂಜದೆ ಒಮ್ಮೆಲೆ ನುಗ್ಗಿ ಅವರ ಕೈಯಿಂದ ಕೋವಿಗಳನ್ನು ಕಸಿದು ಅವರ ಕೈಕಾಲು ಕಟ್ಟಿ ಕೋಣೆಯೊಳಗೆ ತುಂಬಿಸಿದ್ದೇವೆ. ನಮ್ಮವರನ್ನು ಕಾವಲಿರಿಸಿ, ಖಜಾನೆಯ ಹಣವನ್ನು ಹೊರಿಸಿಕೊಂಡು

ಬಂದೆವು. ಇಂಗ್ಲಿಷರ ಆಡಳಿತ ಮುಗಿದು ಊರು ಸ್ವತಂತ್ರವಾಯಿತು ಎಂದು ಪ್ರಚಾರ ಮಾಡುತ್ತಲೇ ಬಂದೆವು.

ರಾಮು---ಅಂತೂ ಸ್ವಾತಂತ್ರ್ಯ ಸಮರದಲ್ಲಿ ಪ್ರಥಮವಾಗಿ ರಕ್ತ ಸುರಿಸಿದ ಕೀರ್ತಿ ಚೆಟ್ಟಿಕುಡಿಯನಿಗಾಯಿತು. ಶಾಬ್ಬಾಸ್.

ಅಣ್ಣಿ--ಅಯ್ಯಯ್ಯೋ ರಾಮಪ್ಪಯ್ಯನ ಸವಾರಿ ಇತ್ತಲೇ ಬರುತ್ತಿದೆ.

(ಎಲ್ಲರೂ ಆ ಕಡೆ ನೋಡುತ್ತಾರೆ)

ಕಲ್ಯಾ—ಓಹೋ....ಅವರು ರಾಮಪ್ಪಯ್ಯನವರಾ?....ಓ ಹೊ ಹೊ ಬರುವ ಠೀವಿಯೇನು?...ಗಾಂಭೀರ್ಯವೇನು?...ಗಂಡುಗಲಿಯಂತೆ ಕಾಣುತ್ತಾರೆ

ರಾಮು--ಆ ಗಂಡುಗಲಿಯ ರುಂಡ ಕಡಿಯದಿದ್ದರೆ ನಮ್ಮ ಯತ್ನವೆಲ್ಲವೂ ದಂಡವೇ ಸರಿ.

ಕಲ್ಯಾ—ಮೊದಲು ವಿಶಯ ವಿವರಿಸಿ ಅವರನ್ನು ನಮ್ಮೆಡೆಗೆ ಒಲಿಸಿಕೊಳ್ಳಲು ಯತ್ನಿಸುತ್ತೇನೆ.

ಅಣ್ಣಿ--ಪ್ರಯೋಜನವಾಗದು.

ಕಲ್ಯಾ—ಮತ್ತೆ ಇದ್ದೇ ಇದೆಯಲ್ಲ ದಂಡೋಪಾಯ.

(ಕೋವಿ ಹಿಡಿದು ರಾಮಪ್ಪಯ್ಯನೂ ಹಿಂದಿನಿಂದ ನಡುಗುವ ಕುಂಞನೂ ಬರುತ್ತಾರೆ)

ಕಲ್ಯಾ--ನಮಸ್ಕಾರ ರಾಮಪ್ಪಯ್ಯನವರೇ....

ರಾಮಪ್ಪಯ್ಯ--ನಿನ್ನ ನಮಸ್ಕಾರಕ್ಕೆ ಬೆಂಕಿ ಹಾಕಿತು. ಸ್ವತಂತ್ರ ಸ್ವತಂತ್ರ ಎಂದುಕೊಂಡು ಊರು ಸುಲಿಗೆಗೆ ಬಂದ ಪೋಲಿಗಳು ನೀವೇನೋ.

ಕಲ್ಯಾ--ಬಂದವರು ನಾವೇ. ಆದರೆ ಊರು ಸುಲಿಗೆಗಲ್ಲ: ನೋಡಿ ಸ್ವಾಮಿ.... ಪುರಾತನ ಕಾಲದಿಂದಲೂ ನಮ್ಮವರೇ ಆಳುತ್ತಿದ್ದ ನಮ್ಮ ನಾಡನ್ನು ಆ ಪರಕೀಯ ಬಿಳಿಯರು ಮೋಸದಿಂದ ಹಿಡಿದು ಆಳುತ್ತಿದ್ದಾರೆ.

ರಾಮಪ್ಪ—ಅವರಲ್ಲಿ ಸಾಮರ್ಥ್ಯವಿದೆ ಆಳುತ್ತಾರೆ.

ರಾಮು--ಅವರ ದಾಸರಾಗಿರುವುದು ನಮಗೆ ನಾಚಿಕೆ ಆಗಿದೆ.

ನಂಜ--ಅವರಿಂದ ಅಧಿಕಾರ ಕಿತ್ತು ನಮ್ಮವರಿಗೇ ಮರಳಿಸಿ ಕೊಡಲು ಹೊರಟ ಸ್ವಾತಂತ್ರ್ಯ ಸೈನಿಕರು ನಾವು.

ಕಲ್ಯಾ--ಭಾರತ ಮಾತೆಯ ಸೇವೆಗಾಗಿ ತಾವೂ ನಮ್ಮೊಂದಿಗಿದ್ದು ಸಹಕರಿಸಬೇಕು.

ರಾಮಪ್ಪ— ಥೂ! ನಿಮ್ಮಂತಹ ಕಾಡುಕಳ್ಳರೊಡನೆ ಕೂಡಿಕೊಳ್ಳುವವ ನಾನಲ್ಲ. ನೀವು ಬಂದ ಹಾಗೆ ಹಿಂದೆ ಹೋದಿರಿ ಬದುಕಿದಿರಿ, ಮುಂದುವರಿದರೆ ಗತಿ ನೆಟ್ಟಗಾಗದು.

ನಂಜ--ಹೋಯಿ ಸ್ವಾಮಿ....ನಿಮ್ಮಲ್ಲಿ ವಿಚಾರ ಶಕ್ತಿ ಇದ್ದರೆ ನಮಗೆ ಸಹಕರಿಸಿರಿ. ಇಲ್ಲವಾದರೆ ನಿಮ್ಮಷ್ಟಕ್ಕೆ ಸುಮ್ಮನಿರಿ.

ರಾಮಪ್ಪ—ಏ....ಇದು ನನ್ನ ಊರು. ನಾನು ಮೂರು ಗ್ರಾಮದ ಪಟೇಲ. ನನ್ನನ್ನು ಸುಮ್ಮನಿರಲು ಹೇಳಲು ನೀನಾರು?

ರಾಮು--ಕೋಪಿಸಬೇಡಿ ರಾಮಪ್ಪಯ್ಯನವರೇ....ಅವರು ಸ್ವಾತಂತ್ರ್ಯ ಸೈನ್ಯದ ದಳವಾಯಿ ನಂಜಣ್ಣ.

ರಾಮಪ್ಪ—ಥೂ ಇವನಂತಹ ನಂಜಣ್ಣ ಮಂಜಣ್ಣ ಕೆಂಚಣ್ಣರು ನನ್ನ ಒಕ್ಕಲಲ್ಲಿ ನೂರಾರು ಮಂದಿ ಇದ್ದಾರೆ. ನೀನು ರಾಮುಗೌಡನೂ ಅಣ್ಣಿಗೌಡನೂ ಇವರೊಂದಿಗೆ ಕೂಡಿ, ಊರುಸುಲಿಗೆ ಮಾಡಿ, ಪಾಲುಪಡೆಯಲು ಹೊರಟದ್ದೀರಾ ?

ಅಣ್ಣಿ--ಕಲ್ಯಾಣಪ್ಪನವರೇ ಇದು ಬಗ್ಗುವ ಮರವಲ್ಲ.

ರಾಮಪ್ಪ—ನಾನು ಬಗ್ಗಲು ಹುಟ್ಟಿದ್ದಲ್ಲ. ನಾಯೀ. ನಿನ್ನಂಥವನನ್ನು ಬಗ್ಗಿಸಲು ಹುಟ್ಟಿದ್ದು.

(ಫಕ್ಕನೆ ಅಣ್ಣಿಗೌಡರು ನುಗ್ಗಿ ಚೂರಿಯಿಂದ ರಾಮಪ್ಪಯ್ಯನನ್ನು ಎರಡು ಮೂರು ಬಾರಿ ತಿವಿಯುತ್ತಾರೆ, ಬೊಬ್ಬಿಡುತ್ತಲೇ ರಾಮಪ್ಪಯ್ಯ ಬೀಳುತ್ತಾರೆ)

ಕಲ್ಯಾ--ಆ....ಅಣ್ಣಿ ಗೌಡರೇ....ಅವಸರ ಮಾಡಿದಿರಿ. ಛೆ!....ಅವರನ್ನು ಸಮಾಧಾನ ಪಡಿಸಲು ಇನ್ನೂ ಯತ್ನಿಸಬಹುದಿತ್ತು. ಮುಗಿಸಿದಿರಿ....

ಚೆಟ್ಟಿ--ಇಂತಹ ತಡೆಗಳನ್ನು ಕಿತ್ತೆಸೆಯದಿದ್ದರೆ ನಮ್ಮ ಕೆಲಸ ಸಾಗದು.

ರಾಮು--ಬೇಸರಿಸಬೇಡಿ. ಇವರು ನಮ್ಮ ವಿರೋಧಿಗಳು ಮಾತ್ರವಲ್ಲ, ಇವರ ಅತ್ಯಾಚಾರಕ್ಕೆ ಬಲಿಯಾದ ಬಡವರು ನೂರಾರು. ಇವರ ಅಹಂಕಾರದಿಂದ ಮಾನ ಕಳಕೊಂಡ ಹೆಂಗಸರು ಹಲವಾರು....ಇಂಥವರು ಹೆಚ್ಚು ಕಾಲ ಬದುಕಿರಬಾರದು.

ಕಲ್ಯಾ--ಏನಾದರೂ ಗಂಡು ಮಗ–ಧೈರ್ಯಶಾಲಿ. ಇಷ್ಟು ಜನ ನಮ್ಮೆದುರಲ್ಲಿ ಎಷ್ಟು ಧೈರ್ಯದಿಂದ ಮಾತಾಡಿದರು?

ಅಣ್ಣಿ--ಇವರ ಗಂಡಸ್ತನಕ್ಕೆ ನಮ್ಮ ಇಡೀ ಕುಟುಂಬವೇ ಬಲಿಯಾಗಿ ನಿರ್ಗತಿಕ
ರಾಗಿದ್ದೇವೆ, ಆ ದ್ವೇಷ ಕುದಿಯುತ್ತಲೇ ಇತ್ತು. ಮುಂದರಿಸಿಬಿಟ್ಟೆ
ಕ್ಷಮಿಸಿಬಿಡಿ

ಕಲ್ಯಾ--ಆಗಲಿ ಇನ್ನೇನು ಮಾಡುವುದು? ನೋಡಲಿಕ್ಕಾಗುವುದಿಲ್ಲ. ಅತ್ತ
ಎಳೆದು ಹಾಕಿರಿ. (ಅತ್ತ ಎಳೆದು ಹಾಕುತ್ತಾರೆ)

ಕಲ್ಯಾ-- ಈಗ ಸುಳ್ಯ, ಪಂಜ, ಬೆಳ್ಳಾರೆ ಪ್ರದೇಶಗಳು ನಮ್ಮ ಸ್ವಾಧೀನ
ಆದಂತಾಯಿತು. ರಾಮಗೌಡರೆ, ಇಲ್ಲಿ ತತ್ಕಾಲ ಆಡಳಿತದ ವ್ಯವಸ್ಥೆ ಮಾಡಿ
ನಾಳೆ ಮುಂಜಾನೆ ಪುತ್ತೂರಿನ ದಾರಿ ಹಿಡಿಯುವ.

ಕುಞ--(ಹೆದರುತ್ತಾ) ನಾ....ನಾ....ನಾನು ನಿಮ್ಮೊಂದಿಗೆ ಬರುತ್ತೇನೆ.

ರಾಮ--ನೀನು ಹೆದರಬೇಡ ಕುಞ....ನಮ್ಮೊಟ್ಟಿಗೆ ಇದ್ದುಬಿಡು. ಬನ್ನಿ, ಬನ್ನಿ
ಎಲ್ಲರೂ ವಿಶ್ರಾಂತಿ ಪಡೆಯೋಣ.

(ಎಲ್ಲರೂ ಹೋಗುತ್ತಾರೆ)

---

## 5ನೇ ದೃಶ್ಯ—ಪುತ್ತೂರು ತಾಲೂಕು ಕಚೇರಿ.

(ಜವಾನ ಮೇಜು ಕುರ್ಚಿಗಳನ್ನು ಒರಸುತ್ತಿರುವಾಗ ಕರಣೀಕ ದೇವಪ್ಪಯ್ಯ
ಪ್ರವೇಶಿಸಿ ಕಚೇರಿಯನ್ನೊಮ್ಮೆ ನೋಡಿ)

ದೇವ—ಏನೋ ನೀನೊಬ್ಬನೆ ಕಾಯುವುದು? ಇತರ ಜವಾನರೆಲ್ಲಿ?
(ಕುಳಿತುಕೊಳ್ಳುತ್ತಾರೆ)

ಜವಾನ--ಕೊಡಗಿನ ದಂಡು ಬರುತ್ತದೆಂದು ಸುದ್ದಿ ಆಗಿದೆ. ಆ ಹೆದರಿಕೆಯಿಂದ
ಯಾರೂ ಬರಲಿಲ್ಲ

ದೇವ--ದಂಡು ಬರುತ್ತದಾದರೆ ಕಚೇರಿ ಬಿಟ್ಟು ಓಡೋದಾ ಹೇಡಿಗಳೇ? ಇಂಗ್ಲಿಷರ
ಕಚೇರಿಯ ಸುದ್ದಿಗೆ ಯಾವ ದಂಡೂ ಬರಲಿಕ್ಕಿಲ್ಲ ಗೊತ್ತೇ ಮಂಗಾ?
(ಕಲ್ಯಾಣಪ್ಪ ಪ್ರವೇಶಿಸುತ್ತಾ ಮಾತಾಡುತ್ತಾನೆ)

ಕಲ್ಯಾ--ಅದೇನು ಇಂಗ್ಲೀಷರ ಕಚೇರಿ ಎಂದರೆ ದೇವಲೋಕದ ದೇವೇಂದ್ರನ
ಸಭೆಯೋ?

(ಜವಾನ ಒಳಗಡೆ ಓಡುತ್ತಾನೆ, ದೇವಪ್ಪಯ್ಯ ಗಾಬರಿಯಾಗಿ ಎದ್ದು ನಿಲ್ಲುತ್ತಾರೆ)

ದೇವ--ಯಾರೋ ನೀನು?

(ಚೆಟ್ಟಿ, ನಂಜಣ್ಣ, ರಾಮಗೌಡ, ಕುಞ, ಅಣ್ಣಿಗೌಡರು ಬರುತ್ತಾರೆ)

ಕಲ್ಯಾ--ನಾನಾರೆಂದು ಮತ್ತೆ ತಿಳಿಯುತ್ತದೆ. ಮೊದಲು ನೀನಾರೆಂದು ಹೇಳು,

ದೇವ--ನಾನು ಕರಣೀಕ ದೇವಪ್ಪಯ್ಯ. ನನ್ನನ್ನು ದೊರೆಗಳು ನೇಮಿಸಿದ್ದು.

ಕಲ್ಯಾ--ಅಧಿಕ ಪ್ರಸಂಗ ಬೇಡ ಕೇಳಿದಷ್ಟಕ್ಕೆ ಉತ್ತರ ಕೊಡು....ನಿನ್ನ ದೊರೆಗಳ ಅಧಿಕಾರ ಇಂದಿಗೆ ಮುಗಿಯಿತು. ಇಂದಿನಿಂದ ಈ ನಾಡು ಸ್ವಾತಂತ್ರ್ಯ ಸೇನೆಯ ವಶವಾಯಿತು. ಇನ್ನು ನೀನು ನಮ್ಮ ಕರಣೀಕನಾಗಿ ಕೆಲಸ ಮಾಡಬೇಕು.

ದೇವ--ನಿಮ್ಮಂತಹ ಸುಲಿಗೆಗಾರರ ಕರಣೀಕನಾಗಿ ನಾನಿರಲಾರೆ.

ಚೆಟ್ಟಿ--ಮುಚ್ಚೋ ಬಾಯಿ. ನಿನಗೂ ದಿನ ಮುಗಿಯಿತೂಂತ ಕಾಣುತ್ತದೆ.

ದೇವ--ಬೇಡ ನಿಮಗೆ....ನಮ್ಮ ತಂಟೆಗೆ ಬಂದರೆ ದೊರೆಗಳು ನಿಮ್ಮನ್ನು ಸುಟ್ಟು ಬಿಟ್ಟಾರು. ಜೋಕೆ!

ಕಲ್ಯಾ--ನಂಜಣ್ಣಾ ಹಿಡಿದು ಕಟ್ಟಿರಿ ಇವನನ್ನು. ಮಾತಾಡಲು ಬಿಡಬೇಡಿ.

(ನಂಜಣ್ಣ, ರಾಮಗೌಡರು ದೇವಪ್ಪಯ್ಯನನ್ನು ಕಟ್ಟುವರು)

ಕಲ್ಯಾ-- ಕಚೇರಿಯೊಳಗೆ ಇನ್ನಾರಿದ್ದಾರೆ? ಹಣವೆಷ್ಟಿದೆ? ಕೋವಿಗಳಿವೆಯೇ ನೋಡಿರಿ.

(ಚೆಟ್ಟಿ, ಕುಞ, ಅಣ್ಣಿಗೌಡರು ಒಳಗೆ ಹೋಗುವರು. ದೇವಪ್ಪಯ್ಯನ ಕುರ್ಚಿಯನ್ನು ಎದುರು ಎಳೆದು ತಂದು ಕಲ್ಯಾಣಪ್ಪ ಕುಳಿತುಕೊಳ್ಳುವನು)

ದೇವ--ದಮ್ಮಯ್ಯ, ನನ್ನನ್ನು ಬಿಟ್ಟು ಬಿಡಿ.

ಕಲ್ಯಾ--ಸಾಧ್ಯವಿಲ್ಲ. ನಮ್ಮನ್ನು ಸುಲಿಗೆಗಾರರೆಂದು ಹೇಳಿದಿ, ನಿನ್ನನ್ನು ಕಟ್ಟಿ ನಮ್ಮೊಂದಿಗೆ ಕೊಂಡುಹೋಗುತ್ತೇವೆ. ನಾವು ಸುಲಿಗೆಗಾರರೇ ಕಳ್ಳರೇ ಅಥವಾ ಸ್ವಾತಂತ್ರ್ಯ ವೀರರೇ ಎಂದು ನೀನು ಕಣ್ಣಾರೆ ಕಾಣಬೇಕು.

(ಒಳಗಿಂದ ಚೆಟ್ಟಿ, ಕುಞ, ಅಣ್ಣಿಗೌಡರು ಬರುವರು)

ಚೆಟ್ಟಿ--ಒಳಗೆ ಜನರಾರೂ ಇಲ್ಲ. ಖಜಾನೆ ತುಂಬ ಹಣವಿದೆ. ಕೆಲವು ಕೋವಿಗಳೂ, ಮದ್ದು ಗುಂಡುಗಳೂ ಇವೆ.

ಕಲ್ಯಾ--ಎಲ್ಲವನ್ನೂ ನಮ್ಮ ಢೇರೆಗೆ ಸಾಗಿಸಿರಿ. ರಾಮಗೌಡರೇ ಈ ಕಚೇರಿಗೂ ತತ್ಕಾಲ ಆಡಳಿತೆಗೆ ಒಬ್ಬರನ್ನೂ, ಕಾವಲಿಗೆ ಕೆಲವರನ್ನೂ ನೇಮಿಸಿರಿ.

ಎಲ್ಲರೂ ಪೇಟೆ ತಿರುಗಿ, ಈ ದಿನ ಪುತ್ತೂರು ತಾಲೂಕು ಸ್ವತಂತ್ರ
ವಾಯಿತು ಎಂದು ಎಲ್ಲರಿಗೂ ತಿಳಿಸಿರಿ. ನಾಳೆ ಬೆಳಿಗ್ಗೆ ಪ್ರಯಾಣ
ಮುಂದುವರಿಸುವ.

**ರಾಮು**--ಪಾಣೆಮಂಗಳೂರಲ್ಲಿ ನಂದಾವರದ ಲಕ್ಷ್ಮಪ್ಪ ಬಂಗರಸರು ನಮ್ಮನ್ನು
ಸೇರಿಕೊಳ್ಳಲು ಕಾದಿರುತ್ತಾರೆಂದು ಸುದ್ದಿ ಕಳುಹಿಸಿದ್ದಾರಲ್ಲಾ.

**ಕಲ್ಯಾ**–ಹೌದು ಮುಂಜಾನೆ ಅಲ್ಲಿಗೆ ಹೋಗುವ. ಬನ್ನಿ ಈಗ ಢೇರೆಗೆ ಹೋಗೋಣ

(ಎಲ್ಲರೂ ಹೋಗುವರು....)

---

## 6ನೇ ದೃಶ್ಯ–ಪಾಣೆಮಂಗಳೂರ ಹಳ್ಳಿ ಪ್ರದೇಶ.

[ಒಂದು ಕಡೆ ಮಧ್ಯೆ ಎರಡು ಹಳೇ ಕಾಲದ ಕುರ್ಚಿಗಳನ್ನೂ ಎರಡು ಬೆಂಚುಗಳನ್ನೂ
ಇಡಲ್ಪಟ್ಟದೆ. ಒಂದರಲ್ಲಿ ಲಕ್ಷ್ಮಪ್ಪ ಬಂಗರಸರು ಕುಳಿತಿದ್ದಾರೆ. ಜವಾನನೊಬ್ಬ ಬದಿ
ನೋಡುತ್ತಿದ್ದ)

**ಜವಾನ**—ಬಂದೇ ಬಿಟ್ಟರು ಸ್ವಾಮಿ...ಅಲ್ಲಿ ನೋಡಿ.
(ಬಂಗರಸರೂ ಎದ್ದು ಆ ಕಡೆ ನೋಡುತ್ತಾರೆ ಕಲ್ಯಾಣಪ್ಪ, ಚೆಟ್ಟ
ರಾಮುಗೌಡ, ಅಣ್ಣಿಗೌಡ, ನಂಜಣ್ಣರು ಬರುತ್ತಾರೆ. ಎಲ್ಲರೂ ನಮಸ್ಕಾ
ಪ್ರತಿನಮಸ್ಕಾರ ಮಾಡುತ್ತಾರೆ.)

**ರಾಮು**--ಇವರೇ ನಂದಾವರದ ಲಕ್ಷ್ಮಪ್ಪ ಬಂಗರಸರು.

**ಕಲ್ಯಾ**—ನೀವು ಹೇಳದೆ ನಾನು ತಿಳಿದುಕೊಂಡೆ.

**ರಾಮು**--ಬಂಗರಸರೇ—ಇವರು ಕಲ್ಯಾಣಪ್ಪನವರು ದಂಡಿನ ಮುಖಂಡರು. ಅವರು
ನಂಜಣ್ಣ....ಇವ ಚೆಟ್ಟಿಕುಡಿಯ...ಅವರು ನಮ್ಮೂರಿನ ಅಣ್ಣಿಗೌಡರು.

**ಬಂಗ**--ಎಲ್ಲರನ್ನೂ ನೋಡಿ ಸಂತೋಷವಾಯಿತು.

**ಕಲ್ಯಾ**—ಬಂಗರಸರೇ ಮೋಸದಿಂದ ಕುತಂತ್ರದಿಂದ ಭಾರತದಲ್ಲಿ ನೆಲೆಯೂರು
ತ್ತಿರುವ ಇಂಗ್ಲೀಷರನ್ನು, ಕೊಡಗು ಮತ್ತು ತುಳುನಾಡಿನಿಂದಾದರೂ ಹೊರ
ಗಟ್ಟಬೇಕೆಂದು ಹೊರಟಿದ್ದೇವೆ, ಸುಳ್ಯದಿಂದ ಪುತ್ತೂರು ವರೆಗಿನ ರಾಜ್ಯ
ಸ್ವಾಧೀನವಾಯಿತು. ಮುಂದಿನದು ದೈವೇಚ್ಛೆ.

ಬಂಗ —ನಮ್ಮಿಂದ ಅಧಿಕಾರ ಕಿತ್ತುಕೊಂಡಂದಿನಿಂದಲೇ ನಾನು ಇಂಗ್ಲೀಷರ ವಿರುದ್ಧ ಕತ್ತಿ ಮಸೆಯುತ್ತಿದ್ದರೂ, ಶಕ್ತಿ ಸಾಲದೆ ಸುಮ್ಮನಾಗಿದ್ದೆ. ಈಗ ನೀವೂ ಅದೇ ಉದ್ದೇಶದಿಂದ ಹೊರಟ ಸುದ್ದಿ ಕೇಳಿ ನಿಮ್ಮೊಂದಿಗೆ ಕೂಡಿ ಒಂದಾಗಿ ಹೋರಾಡುವುದೆಂದು ಯೋಚಿಸಿ ನಿಮಗೆ ಹೇಳಿ ಕಳುಹಿಸಿದೆ.

ಕಲ್ಯಾ—ಉತ್ತಮ ಕೆಲಸ ಮಾಡಿದಿರಿ. ಒಕ್ಕಟ್ಟಿನಲ್ಲಿ ಬಲವಿದೆ. ಇನ್ನು ಮುಂದೆ ನಮ್ಮ ಸೇನೆಗೆ ನೀವೇ ಮುಖಂಡರು.

ಬಂಗ--ಅಲ್ಲಲ್ಲ, ನಾವಿಬ್ಬರೂ ರಾಮಲಕ್ಷ್ಮಣರಂತೆ ಒಂದಾಗಿ ದುಡಿಯುವ, ಒಂದಾಗಿ ಮಡಿಯುವ.

ಕಲ್ಯಾ—ಶಾಬ್ಬಾಸ್ ಬಂಗರಸರೇ ಶಾಬ್ಬಾಸ್....

(ಅಪ್ಪಿಕೊಳ್ಳುವರು)

ಬಂಗ--ಆ....ಎಲ್ಲರೂ ಕುಳಿತುಕೊಳ್ಳಿ. (ಕುಳಿತುಕೊಳ್ಳುವರು)

ಕಲ್ಯಾ—ಮುಂದಿನ ಕಾರ್ಯಕ್ರಮ ಹೇಗೆ ಬಂಗರಸರೇ....?

ಬಂಗ--ಈ ದಿನ ಇಲ್ಲೇ ಹತ್ತಿರದ ಬಂಟವಾಳದ ಕಚೇರಿಯನ್ನೊಂದು ಸ್ವಾಧೀನ ಪಡಿಸಿ ವಿಶ್ರಾಂತಿ ಪಡೆಯುವ. ನಾಳೆ ಮುಂಜಾನೆ ಮಂಗಳೂರಿಗೆ ಹೊರಡುವ.

ನಂಜ—ಸರಿ ಹಾಗಾದರೆ ಬಂಟವಾಳಕ್ಕೆ ಹೊರಡೋಣ.

ಬಂಗ--ಅಲ್ಲ....ದೂರದಿಂದ ದಣಿದು ಬಂದಿದ್ದೀರಿ ಮೊದಲು ಊಟ ಆಗಬೇಕು. ಆನಂತರ ಕೆಲಸ. ಬನ್ನಿ, ನಿಮ್ಮ ಕಡೆಯವರೆಲ್ಲರೂ, ಅಲ್ಲಿ ಕಾಣುವ ದೊಡ್ಡ ಚಪ್ಪರಕ್ಕೆ ಊಟಕ್ಕೆ ಬರಲಿ. ಬನ್ನಿ, ಎಲ್ಲರೂ ಹೋಗೋಣ.

ನಂಜ--ನಂದಾವರದ ಬಂಗರಸರಿಗೆ ಜಯವಾಗಲಿ.

ಎಲ್ಲರೂ—ಬಂಗರಸರಿಗೆ ಜಯವಾಗಲಿ.

ನಂಜ--ಸ್ವಾತಂತ್ರ್ಯವೀರ ಕಲ್ಯಾಣಪ್ಪನವರಿಗೆ ಜಯವಾಗಲಿ.

ಎಲ್ಲರೂ--ಕಲ್ಯಾಣಪ್ಪನವರಿಗೆ ಜಯವಾಗಲಿ. [ಎಲ್ಲರೂ ಹೋಗುತ್ತಾರೆ]

---

## 7ನೇ ದೃಶ್ಯ— ಹಳ್ಳಿ ಮಾರ್ಗ.

(ಕೈಗಳನ್ನು ಕಟ್ಟಿದ ದೇವಪ್ಪಯ್ಯನೊಂದಿಗೆ ಕುಂಞ ಮತ್ತೊಬ್ಬ ಜವಾನ ಬರುತ್ತಾರೆ.)

**ಜವಾನ**--ಬಹಳ ಬಾಯಾರಿಕೆ ಆಗುತ್ತದೆ, ಮಾಡುವುದೇನು?

**ದೇವ**--ಅದಕ್ಕೇಕೆ ಚಿಂತೆ, ಅಗೋ ನೋಡು ಅಲ್ಲಿ ಕಾಣುವ ಆ ಹುಲ್ಲಿನ ಮ... ನನ್ನ ಭಾವನ ಮನೆ. ನಾವು ಇಲ್ಲಿ ಕುಳಿತಿರುತ್ತೇವೆ ನೀನು ಹೋಗಿ ನನ... ಹೆಸರು ಹೇಳು. ಬೇಕಾದಷ್ಟು ಸೀಯಾಳ ತೆಗೆದುಕೊಡುತ್ತಾರೆ ನೀನ... ಅಲ್ಲೇ ಕುಡಿದು ನಮಗೂ ತಂದುಕೊಡು.

**ಕಾಂತು**-ನಿಮ್ಮನ್ನು ಬಿಟ್ಟು ಎಲ್ಲೂ ಹೋಗಬಾರದೆಂದು ಕಲ್ಯಾಣಪ್ಪನವರ ಹುಕ... ವಾಗಿದೆ.

**ದೇವ**--ನಿನ್ನನ್ನು ಅಪವಾದದಲ್ಲಿ ಸಿಕ್ಕಿಸಿ ಓಡುವಷ್ಟು ನೀಚನು ನಾನಲ್ಲ ತಿಳಿಯಿತೇ... ನನಗೂ ಕೊನೆವರೆಗೆ ನಿಮ್ಮೊಂದಿಗೆ ಬಂದು, ಸ್ವಾತಂತ್ರ್ಯ ಸಮರ ನೋಡ... ಬೇಕೆಂಬ ಆಶೆಯೂ ಇದೆ.

**ಕುಞ**--ಹೌದು ಕಾಂತೂ ಹೋಗಿ ಬಾ. (ಕಾಂತು ಹೋಗುತ್ತಾನೆ)

**ದೇವ**--ಇದು....ಕುಂಞನಿಗೆ ಮಕ್ಕಳೆಷ್ಟು?

**ಕುಞ**--ನನಗೆ....ಒಂದನೇ ಹೆಂಡತಿಯಲ್ಲಿ ಮೂರು ಮಕ್ಕಳು. ಎರಡನೆಯವಳ... ಒಂದೇ ಮಗು...ಮತ್ತೆ...ಮತ್ತೆ...ಮತ್ತೆ...

**ದೇವ**—ಅದೆಂಥದು ಮತ್ತೇ ಮತ್ತೆ.

**ಕುಞ**--ಅಲ್ಲಾ....ನಮ್ಮ ತೋಡಿನ ಆಚೆ ಬದಿಯ ಕೂಸಮ್ಮನಿಗೂ ನನಗು... ಒಳ್ಳೆಯದಿದೆ. ಅವಳಿಗೆ ಎರಡು ಮಕ್ಕಳು.

**ದೇವ**--ಆ....ಜೋರಿದ್ದಿ ನೀನು, ಕಂಡಹಾಗಲ್ಲ.

**ಕುಞ**--ದೇವರು ಕೊಟ್ಟದ್ದಾರೆ...

**ದೇವ**--ಮಕ್ಕಳನ್ನು ದೇವರು ಕೊಟ್ಟರೂ ಹೆಂಡತಿ ಮಕ್ಕಳಿಗೆ ಅನ್ನ ಬಟ್ಟೆ ನೀನೇ... ಕೊಡಬೇಕಲ್ಲ.

**ಕುಞ**--ಹೌದು ಸ್ವಾಮೀ ಅದು ಬಹಳ ಕಷ್ಟಕ್ಕಿಟ್ಟುಕೊಂಡಿದೆ. ಕಾಡಿ-ಬೇಡಿ... ಸಾಲ-ಗೀಲ ಮಾಡಿ ಪೇಚಾಡುತ್ತಿದ್ದೇನೆ.

**ದೇವ**--ಓ ಪಾಪವೇ, ಈ ಸಂಗತಿ ನನಗೆ ಪುತ್ತೂರಲ್ಲಿ ಗೊತ್ತಾಗದೆ ಹೋಯಿತು.

ಕುಞ—ಗೊತ್ತಾಗುತ್ತಿದ್ದರೆ?

ದೇವ--ನಿನ್ನ ಕಷ್ಟ ದೂರವಾಗುತ್ತಿತ್ತು. ನೋಡು, ದಂಡು ಬರುವ ಸುದ್ಧಿ ಕೇಳಿ ನಾನು ಖಜಾನೆಯಿಂದ ಐದು ಸಾವಿರ ವರಹ ತೆಗೆದು ಅಡಗಿಸಿಟ್ಟದ್ದೇನೆ. ಅದನ್ನು ನಿನಗಾದರೂ ಕೊಡಬಹುದಿತ್ತು. ನನಗೆ ಮಕ್ಕಳೂ ಇಲ್ಲ.

ಕುಞ--ಹೌದೇ ಸ್ವಾಮೀ?....ಓ ದೇವರೇ ನನ್ನ ಗ್ರಹಚಾರವೇ?

ದೇವ--ಗ್ರಹಚಾರವೇನೂ ಇಲ್ಲ. ನೀನು ಮನಸ್ಸು ಮಾಡಿದರೆ ಇನ್ನೂ ಕೊಡಬಹುದು.

ಕುಞ--ಅದು ಹೇಗೆ ಸ್ವಾಮೀ? ಹಣ ಪುತ್ತೂರಿನಲ್ಲಿ ಇರುವುದಲ್ಲವೇ?....

ದೇವ--ನನ್ನ ಹಗ್ಗ ಬಿಚ್ಚಿದರೆ, ನಾವು ಬೇಗ ಪುತ್ತೂರಿಗೆ ಹೋಗಿ ಬರುವ. ದುಡ್ಡು ತೆಗೆದುಕೊಂಡು ಮರಳಿ ಬಂದು ಇವರನ್ನು ಕೂಡಿಕೊಂಡರಾಯಿತಲ್ಲಾ,

ಕುಞ--ಆದೀತು ಸ್ವಾಮೀ....ಹೋಗುವ. ಕಾಂತು ಬರುವ ಮೊದಲೇ ಜಾರಿಬಿಡುವ. (ಕುಂಞ ದೇವಪ್ಪಯ್ಯನ ಕೈಬಿಚ್ಚುವನು. ಕೂಡಲೇ ಅದೇ ಹಗ್ಗ ಎಳೆದು ಕುಂಞನನ್ನು ಕಟ್ಟಿ ಕೆಳಗುರುಳಿಸಿ, ಬಾಯಿಗೆ ಬಟ್ಟೆ ತುರುಕಿ, ದೇವಪ್ಪಯ್ಯ ಓಡುವರು. ಕುಞ ಹೊರಳಾಡುತ್ತಿರುವನು. ತುಸು ಹೊತ್ತಿನಲ್ಲಿ ಕಾಂತು ಬರುವನು )

ಕಾಂತು—ಆ....ಇದೇನು ಕುಂಞ....?

(ಬಾಯಿಯ ಬಟ್ಟೆ ತೆಗೆದು ಹಗ್ಗ ಬಿಚ್ಚುವನು)

ಕುಞ—ಆ ಮುದುಕ ಮೋಸ ಮಾಡಿದನಲ್ಲಾ.

ಕಾಂತು--ಅವರು ಹೇಳಿದ್ದೆಲ್ಲ ಸುಳ್ಳು. ಆ ಮನೆಯವರಿಗೆ ದೇವಪ್ಪಯ್ಯನ ಗುರುತೇ ಇಲ್ಲವಂತೆ. ಸೀಯಾಳ ಕೊಡಲಿಕ್ಕೆ ಆಗುವುದಿಲ್ಲವೆಂದರು.

ಕುಞ--ನಮಗೆ ಏಡಿಯೂ ಇಲ್ಲ, ಏಡಿಗೆ ಹಾಕಿದ ಕೈಯೂ ಇಲ್ಲ,

ಕಾಂತು--ಆಲೋಚನೆ ಮಾಡಿದರಾಗದು. ಬೆನ್ನಟ್ಟಿ ದೇವಪ್ಪಯ್ಯನನ್ನು ಹಿಡಿಯಲೇಬೇಕು. (ಓಡುವರು.)

---

## 8ನೇ ದೃಶ್ಯ—ಬಾವಟೆಗುಡ್ಡೆಯಲ್ಲಿ ಥೇರೆ.

[ಥೇರೆಯ ಎದುರಿನಲ್ಲಿ, ಒಂದು ಬೆಂಚು, ಎರಡು ಕುರ್ಚಿಗಳು ಇಡಲ್ಪಟ್ಟು ಒ
ಜವಾನ ಕಾವಲಾಗಿ ನಿಂತಿದ್ದಾನೆ. ಯುದ್ಧದ ಉಡುಪಿನಲ್ಲಿ ಬಂಗರಸರೂ ಕಲ್ಯಾಣಪ್ಪನ
ಪ್ರವೇಶಿಸುತ್ತಾರೆ.]

ಬಂಗ—ಯಾವ ಹೊಡೆದಾಟವೂ ಇಲ್ಲದೆ ಮಂಗಳೂರಿನ ಜಿಲ್ಲಾ ಕಚೇರಿ ನವ
ಸ್ವಾಧೀನ ಬರುತ್ತದೆಂದು ನಾನು ಊಹಿಸಿರಲೇ ಇಲ್ಲ.

ಕಲ್ಯಾ—ನನಗೂ ಆಶ್ಚರ್ಯ ಕಾಣುತ್ತದೆ. ಇಡೀ ಜಿಲ್ಲೆಯ ಆಡಳಿತ ಕಚೇರಿಯಲೂ
ಕೇವಲ 50 ಜನ ಜವಾನರ ಕಾವಲು ಇರುವುದೆಂದರೆ, ಪರಮಾಶ್ಚರ್ಯ
ಮಂಗಳೂರ ಜನ ಅಷ್ಟು ಸಜ್ಜನರೆಂದು ಗೃಹಿಸಿದ್ದರೇ ಬಿಳಿಯರು?

ಬಂಗ—ಅಲ್ಲವೇ ಅಲ್ಲ. ಇದರಲ್ಲೇನೋ ಮೋಸವಿರಲೇಬೇಕು.

(ನಂಜಣ್ಣ ಬರುತ್ತಾರೆ)

ನಂಜ—ಬಂದರ ಕಚೇರಿಯಲ್ಲಿ ಬೆರಳೆಣಿಕೆಯಷ್ಟು ಸೈನಿಕರಿದ್ದರು. ನಾ
ಒಮ್ಮೆಲೇ 200 ಜನ ನುಗ್ಗಿದರೂ ಅವರು ಸುಲಭದಲ್ಲಿ ಬಗ್ಗಲಿಲ್ಲ, ಸಾ
ವಿದ್ದಷ್ಟು ಹೋರಾಡಿದರು. ನಮ್ಮ ಕೈ ಮೇಲಾದಾಗ ದಮ್ಮಯ್ಯ ಹಾಕಿದರು
ಕಚೇರಿಯ ಮೇಲೆ ಸ್ವಾತಂತ್ರ್ಯ ಬಾವುಟ ಏರಿಸಿ, ಕಾವಲಿಗೆ ಜನ ಇರಿಸಿ
ನಿಮ್ಮನ್ನು ಕಾಣಲು ಬಂದೆವು.

ಬಂಗ—ನಾವು ಹೊಡೆದಾಟವಿಲ್ಲದೆ ಜಿಲ್ಲಾ ಕಚೇರಿ ಹಿಡಿದಿದ್ದೇವೆ....ಆದರೆ ಈ
ನಮಗೆ ಕಂಡ ದೃಶ್ಯ ಮೋಸ. ಎಲ್ಲೋ ಮೂಲೆಯಲ್ಲಿ ಬಿಳಿಯರ ಸೈನ
ವಿರಲೇಬೇಕು. (ಚೆಟ್ಟಿ, ರಾಮಗೌಡ, ಅಣ್ಣಿಗೌಡರು ಬರುವರು.)

ಚೆಟ್ಟಿ—ಯಾವ ಮೂಲೆಯಲ್ಲೂ ಸೈನ್ಯವಿಲ್ಲ. ಕಂಕನಾಡಿಯಿಂದ ಕಡಲ ಕಿನಾ
ವರೆಗೆ, ಹ್ಯೊಗೆ ಬಜಾರಿನಿಂದ ಕುದ್ರೋಳಿಯ ವರೆಗೆ, ತಿರುಗಿ ನೋಡಿಬಂದೆವು

ಅಣ್ಣಿ—ದಂಡು ಬರುವ ಸುದ್ದಿ ತಿಳಿದು ಬಿಳಿಯ ದೊರೆಗಳು ಸೈನಿಕರೊಂದಿ
ಹಡಗಿನ ಮುಖಾಂತರ ನಿನ್ನೆಯೇ ತಲಚೇರಿಗೆ ಓಡಿದ್ದಾರಂತೆ.

ರಾಮು—ಸದ್ಯ ಸುಳ್ಯದಿಂದ ಹಿಡಿದು ಮಂಗಳೂರ ವರೇಗಿನ ಪ್ರದೇಶ ನಮ್ಮ ವ
ವಾದ ಹಾಗಾಯಿತು.

ಚೆಟ್ಟಿ—ನಾಡು ಸ್ವತಂತ್ರವಾದುದನ್ನು ಡಂಗುರಸಾರಿ ಎಲ್ಲರಿಗೂ ತಿಳಿಸಿದೆವು.

ಅಣ್ಣಿ--ಆದರೂ ಜನರು ಹೆದರಿಕೆಯಿಂದ ರಸ್ತೆಗಿಳಿಯದೆ ಮನೆಯೊಳಗಿಂದಲೇ ಇಣಿಕಿ ನಮ್ಮನ್ನು ನೋಡುತ್ತಿದ್ದಾರೆ.

ನಂಜ--ಬಂದರದ ಕೆಲವು ವ್ಯಾಪಾರಿಗಳು "ನಿಮ್ಮ ಮುಖಂಡರೆಲ್ಲಿ—ಅವರಲ್ಲಿ ಮಾತಾಡಬೇಕಿತ್ತು" ಎಂದರು. "ಬಾವಟೆಗುಡ್ಡೆಯಲ್ಲಿ ಢೇರೆಯಲ್ಲಿದ್ದಾರೆ, ಅಲ್ಲಿಗೆ ಬನ್ನಿ" ಎಂದು ತಿಳಿಸಿದ್ದೇವೆ.

ಕಲ್ಯಾ—ಆಯಿತಲ್ಲಾ....ಇಡೀ ತುಳುನಾಡಿನಿಂದ ಇಂಗ್ಲೀಷರನ್ನು ಓಡಿಸಿದೆವಲ್ಲಾ?

ಬಂಗ--ಆವಸರ ಮಾಡಬೇಡಿ. ನಾಲ್ಕು ದಿನ ಕಳೆದಾದರೂ ಬಿಳಿಯರು ದಾಳಿ ಮಾಡದಿರಲಾರರು.

ಕಲ್ಯಾ—ಒಮ್ಮೆ ಸ್ವಾಧೀನಕ್ಕೆ ಬಂದ ಪ್ರದೇಶವನ್ನು ಜೀವ ಹೋದರೂ ಬಿಟ್ಟು ಕೊಡಲಾರೆವು. ಬನ್ನಿ ಕುಳಿತುಕೊಳ್ಳಿ (ಎಲ್ಲರೂ ಕುಳಿತುಕೊಳ್ಳುವರು)

ಬಂಗ--ಇಂದು ರಾತ್ರಿ ವಿಶ್ರಾಂತಿ ಪಡೆದು ನಾಳೆ ಆಡಳಿತೆಯನ್ನು ಸರಿಪಡಿಸುವ ಆಗದೆ?

ಕಲ್ಯಾ--ಹೌದು ಸರಿಪಡಿಸಿದ ಆಡಳಿತೆಯನ್ನು ನಿಮ್ಮ ಕೈಗೊಪ್ಪಿಸಿ, ನಾವು ಕೊಡಗು ಸ್ವಾಧೀನಕ್ಕೆ ಹೋಗುತ್ತೇವೆ

ಬಂಗ-ಅದೇಕೆ ಹಾಗೆ? ಒಟ್ಟಾಗಿ ಇಲ್ಲಿಯ ಆಡಳಿತೆಯನ್ನು ನೋಡುವ, ಒಟ್ಟಾಗಿಯೇ ಕೊಡಗಿನ ಯುದ್ಧವನ್ನೂ ಮಾಡುವ, ನಾನೂ ಬರುತ್ತೇನೆ.

ಕಲ್ಯಾ—ಶಾಬ್ಬಾಸ್, ನಿಮ್ಮಂತಹ ನಿಸ್ವಾರ್ಥಿ ಕೆಚ್ಚೆದೆಯ ವೀರ ಅಣ್ಣನು ದೊರೆಕಿದುದು ನನ್ನ ಭಾಗ್ಯ. (ಎದ್ದು ನಿಲ್ಲುವನು)

ಬಂಗ—ಅದೇನು ಮಹಾ....? ನಿನ್ನಂತಹ ಸ್ವಾತಂತ್ರ್ಯವೀರ ತಮ್ಮನನ್ನು ಪಡೆದುದು ನನ್ನ ಪೂರ್ವಪುಣ್ಯ ಫಲವೇ ಆಗಿರಬೇಕು. (ಏಳುವರು)

ಕಲ್ಯಾ—ಅಣ್ಣಾ...(ಎದ್ದು ನಿಂತು ಒಬ್ಬರನ್ನೊಬ್ಬರು ಆಲಂಗಿಸುವರು)

ಕಲ್ಯಾ--ಸಂಗಡಿಗರೇ ತುಂಬಾ ದಣಿದಿದ್ದೀರಿ, ಎಲ್ಲರೂ ವಿಶ್ರಾಂತಿ ಪಡೆಯಿರಿ. ಮುಂದಿನ ಕಾರ್ಯ ನಾಳೆ ಯೋಚಿಸುವ.

(ಎಲ್ಲರೂ ಹೋಗುವರು)

ಬಂಗ—ಬನ್ನಿ ನಾವೂ ಢೇರೆಯೊಳಗೆ ವಿಶ್ರಮಿಸೋಣ.

ಕಲ್ಯಾ--ಹೌದು, ಇಂದಾದರೂ ತೃಪ್ತಿಯಿಂದ ಮಲಗಿ ನಿದ್ರಿಸಬೇಕು.

(ಇಬ್ಬರೂ ಒಳಗೆ ಹೋಗುವರು)

---

## 9ನೇ ದೃಶ್ಯ—ಅದೇ ಛೇರಿ.

[ಒಂದು ಕಂಬಕ್ಕೆ ಕಟ್ಟಿದ ಪಂಜು ಮಾತ್ರ ಉರಿಯುತ್ತಿದೆ. ಒಬ್ಬ ಜವಾನ ಕಾವಲಾಗಿ ನಿಂತಿದ್ದಾನೆ. ಕಳ್ಳ ಹೆಜ್ಜೆಯಿಂದ ಬಿಳಿಯ ಸೈನಿಕನೊಬ್ಬ ಜವಾನನ ಹಿಂದಿನಿಂದ ಬಂದು ಫಕ್ಕನೆ ಬಾಯಿಗೆ ಕೈಹಿಡಿದು ಅತ್ತ ಎಳೆದುಕೊಂಡು ಹೋಗುತ್ತಾನೆ. ಹಾಗೆಯೇ ಮತ್ತೊಬ್ಬ ಸೈನಿಕ, ಮಗದೊಬ್ಬ ಬರುತ್ತಿರುತ್ತಾರೆ. ಕೊನೆಗೆ ದೊರೆ ಬರುತ್ತಾನೆ. ದೊರೆಯ ಕೈ ಸನ್ನೆಯಂತೆ ಸೈನಿಕರು ಮೆಲ್ಲ ಛೇರಿಯೊಳಗೆ ಹೋಗಿ ಮಲಗಿದವರನ್ನು ಕಟ್ಟುತ್ತಾರೆ. ದಡಬಡ ಶಬ್ದವಾಗುತ್ತದೆ.]

**ಕಲ್ಯಾ**--(ಒಳಗಿನಿಂದ) ಬಂಗರಸರೇ ಏಳಿರಿ. ವೈರಿಗಳು ಬಂದಿದ್ದಾರೆ.

**ಬಂಗ**--(ಒಳಗಿನಿಂದ) ನೀಚರೆ, ದೂರನಿಲ್ಲಿ....ಕೊಂದು ಬಿಟ್ಟೇನು.

**ಕಲ್ಯಾ**--(ಒಳಗಿನಿಂದ) ಕಳ್ಳರೇ ಇದೋ ನಿಮ್ಮ ಪೌರುಷ?

(ಸರಪಳಿಯಿಂದ ಬಿಗಿದ ಕಲ್ಯಾಣಪ್ಪನನ್ನೂ ಬಂಗರಸರನ್ನೂ ಸೈನಿಕರು ಎಳೆದು ತರುತ್ತಾರೆ.)

**ಕಲ್ಯಾ**--(ದೊರೆಯನ್ನು ನೋಡಿ) ದ್ರೋಹಿ, ಕಳ್ಳರಂತೆ ಬಂದು ನಿದ್ರಿಸುವವರನ್ನು ಬಂಧಿಸುವ ನಿಮ್ಮ ಪೌರುಷಕ್ಕೆ ಧಿಕ್ಕಾರ. ಥೂ.

**ದೊರೆ**--ಬೊಗಳಿದರೆ....ಸುಟ್ಟು ಬಿಟ್ಟೇನು. ಜಾಗ್ರತೆ. ಹೂಂ, ಕೊಂಡು ಹೋಗಿರಿ.

(ಸೈನಿಕರು ಕೈದಿಗಳನ್ನು ಕೊಂಡುಹೋಗುತ್ತಾರೆ, ದೊರೆಯೂ ಹೊರಡುವನು)

---

## 10ನೇ ದೃಶ್ಯ—ಬಿಕರ್ಣಕಟ್ಟೆಯ ವಧಾಸ್ಥಾನ.

[ಮರದ ರೆಂಬೆಯಲ್ಲಿ ಎರಡು ಹಗ್ಗದ ಉರುಳುಗಳು ಜೋತಾಡುತ್ತಿವೆ. ಸರಪಳಿಗಳಿಂದ ಕಟ್ಟಲ್ಪಟ್ಟ ಬಂಗರಸರನ್ನೂ ಕಲ್ಯಾಣಪ್ಪನನ್ನೂ ಬಿಳಿಯ ಸೈನಿಕರು ಎಳೆದು ತರುತ್ತಾರೆ. ಕಲ್ಯಾಣಪ್ಪ ನಿಂತು ಉರುಳನ್ನು ನೋಡಿ]

**ಕಲ್ಯಾ**--ಹುಂ, ಪರದೇಶದಿಂದ ವ್ಯಾಪಾರಕ್ಕಾಗಿ ಬಂದು, ಮೋಸದಿಂದ ರಾಜ್ಯ ವಿಸ್ತರಿಸುವ ಸುಲಿಗೆಗಾರರಿಗೆ ಜಯಮಾಲೆ-ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುವವರಿಗೆ ಕೊರಳಿಗೆ ಉರುಳು!....ಏನು ಅಭಾಸ....? ವಿಧಿಗೆ ಹೃದಯವಿಲ್ಲವೇ? ದೇವರಿಗೆ ಕಣ್ಣಿಲ್ಲವೇ?

ಬಂಗ—ತವ್ಮ್ಯಾ....ನಾವು ನಿಶ್ಚಿಂತರಾಗಿ ನಿದ್ರಿಸಬಾರದಿತ್ತು. ವೈರಿಗಳು ಬಾರದಂತೆ ಸಮುದ್ರ ಕಿನಾರೆಯಲ್ಲಿ ಕಾವಲಿರಬೇಕಿತ್ತು. ನಮ್ಮ ಅಜಾಗ್ರತೆಗೆ ವಿಧಿಯನ್ನೂ, ದೇವರನ್ನೂ ಹಳಿಯಬೇಡ. ಸಾಯಲು ಹೆದರಲೂ ಬೇಡ.

ಕಲ್ಯಾ--ಛೆ!....ನಮ್ಮ ಸಾವಿಗಾಗಿ ನಾನು ಮರುಗುತ್ತಿಲ್ಲ. ನಮ್ಮ ಮುಂದಾಳುತ್ವದಲ್ಲಿ ವಿಶ್ವಾಸವಿರಿಸಿ ನಮ್ಮೊಂದಿಗೆ ಬಂದ ಸಾವಿರಾರು ವೀರ ಯುವಕರು ಈ ನೀಚರ ಗುಂಡಿಗೆ ಬಲಿಯಾದರಲ್ಲಾ ಎಂಬುದೇ ಚಿಂತೆ.

ಬಂಗ—"ಹತ್ತರ ಸಾವು ಮದುವೆಗೆ ಸಮಾನ"ಎಂಬ ಗಾದೆ ಇದೆ, ಅದರಲ್ಲೂ ನಮ್ಮೆಲ್ಲರ ಸಾವು ಸಾಮಾನ್ಯವಲ್ಲ. ಭಾರತ ಮಾತೆಯ ಬಂಧ ವಿಮೋಚನೆಗಾಗಿ ಹೋರಾಡಿ. ಕೀರ್ತಿ ಉಳಿಸಿ, ವೀರಸ್ವರ್ಗ ಗಳಿಸುವ ಶುಭಮರಣ.

(ದೊರೆ ಬಂದು ನಿಲ್ಲುವನು)

ಕಲ್ಯಾ--ಬಂದೆಯಾ ಹೇಡಿ? ಧರ್ಮಯುದ್ಧದಲ್ಲಿ ಹೋರಾಡಲು ಧೈರ್ಯವಿಲ್ಲದೆ ನಿದ್ರಿಸುವವರನ್ನು ಬಂಧಿಸಿದ ನೀಚಾ....ಗಂಡಸುತನವಿದ್ದರೆ ನನ್ನ ಕೈಗೂ ಕತ್ತಿಕೊಟ್ಟು ನಮ್ಮೊಡನೆ ಕಾದಾಡಿ ನೋಡು.

ಬಂಗ--ಥೂ! ಅವನಲ್ಲೆಲ್ಲಿದೆ ಗಂಡಸ್ತನ? ಅವರು ಭಾರತಕ್ಕೆ ಬಂದುದೇ ಸುಲಿಗೆ ಮಾಡಲು. ಅವರ ಭಂಡವಾಳವೇ ಮೋಸ. ಅವರ ಶಕ್ತಿಯೇ ಕುತಂತ್ರ.

ದೊರೆ--ಶಟ್-ಅಪ್ ಫೂಲ್ಸ್, ಸಾಯಲು ಒಂದು ನಿಮಿಷ ಇದೆ. ದೇವರನ್ನು ನೆನಪು ಮಾಡು. ಬುದ್ಧಿ ಇಲ್ಲದ ಬಡ್ಡು ಜನರಿಗೆ ಸ್ವಾತಂತ್ರ್ಯ ಬೇಕಂತೆ. ಸ್ವಾತಂತ್ರ್ಯ ಹ್ಹ....ಹ್ಹ...ಹ್ಹ....ಹ್ಹ....

ಕಲ್ಯಾ--ನಗುವೆಯಾ ನಾಯೀ? ನಗು, ನಗು, ನೀನು ಅಳುವ ದಿನವೂ ದೂರವಿಲ್ಲ. ನಮ್ಮಂತಹ ಸಾವಿರಾರು ಜನರನ್ನೂ ಕೊಂದರೂ, ಭಾರತದ ಪಟ್ಟ ನಿನಗೆ ಶಾಶ್ವತವಾಗದು. ಇಂದಲ್ಲ-ನಾಳೆಯಲ್ಲ-ನೂರು ವರ್ಷಗಳು ಕಳೆದಾದರೂ ಭಾರತದ ವೀರ ಜನತೆ ನಿಮ್ಮ ಅಧಿಕಾರವನ್ನು ಕಿತ್ತೊಗೆದು ನಿಮ್ಮನ್ನು ಸಮುದ್ರಕ್ಕಟ್ಟಲಿದ್ದಾರೆ. ಭಾರತ ಮಾತೆ ಬಂಜೆಯಲ್ಲ ನೀಚಾ ನೆನಪಿಟ್ಟುಕೊ.

ದೊರೆ--ಹುಂ...ತೂಗು ಹಾಕಿರಿ...ಅವರನ್ನು....ರಾಸ್ಕಲ್ಸ್.

ಕಲ್ಯಾ—ತೂಗು ಹಾಕಲು ಅವರ ಅಗತ್ಯವಿಲ್ಲ...ಭಾರತಮಾತೆಯ ಬಿಡುಗಡೆಗಾಗಿ ಸಂತೋಷದಿಂದ ಹೆಮ್ಮೆಯಿಂದ ಪ್ರಾಣ ಅರ್ಪಿಸುತ್ತೇವೆ. ಈ ಬಂದ ಜನ

ದಲ್ಲಲ್ಲ ಮುಂದಿನ ನೂರು ನೂರು ಜನ್ಮಗಳಲ್ಲೂ ಸ್ವಾತಂತ್ರ್ಯ ಯೋಧನಾಗಿ
ಜನ್ಮವೆತ್ತಿ ಭಾರತಮಾತೆಯ ಸೇವೆ ಮಾಡುವೆ. ಜೈ ಭಾರತ ಮಾತೆ.

(ತಾನೇ ಮುಂದೆ ಹೋಗಿ ಉರುಳಿಗೆ ಕೊರಳೊಡ್ಡುವನು. ಬಂಗರಸರೂ
ಅನುಕರಿಸುವರು. ಪರದೆ ಬೀಳುವುದು. ತೆಳು ಪರದೆಯ ಹಿಂದಿನಿಂದ ಉರುಳಿನಲ್ಲಿ
ಶವಗಳು ನೇತಾಡುವ ನೆರಳು ತೋರಿಸುವುದು ಹೆಚ್ಚು ಪರಿಣಾಮಕಾರಿ. ಅಲ್ಲಿ
ಭಾವಗೀತೆಯನ್ನೂ ಅಳವಡಿಸಬಹುದು.)

---

## ಈ ನಾಟಕದ ಹಿನ್ನಲೆ

"ಕೊಡಗಿನ ಕೊತ್ತಳಿಗೆ ಭಟರ ದಂಡು ತುಳುನಾಡ ಸುಲಿಗೆಗೆ ಬಂದಿತ್ತು"
ಎಂದು ಹಲವು ಹಿರಿಯರು ಹೇಳುವುದನ್ನು ಕೇಳಿದ್ದೆ. ಆ ಹೇಳಿಕೆಯಲ್ಲಿ ಸ್ವಾತಂತ್ರ್ಯದ
ಸುದ್ದಿಯಿರಲಿಲ್ಲ. ಬೇಕಲ ರಾಮನ್ನಾಯಕರ "ಕಲ್ಯಾಣಪ್ಪನ ಕಾಟಕ್ಕಾಯಿ" ಕಥೆ
ಹಾಗೂ ನಿರಂಜನರ "ಕಲ್ಯಾಣಸ್ವಾಮಿ" ಕಾದಂಬರಿಯಲ್ಲಿ, ಅದು ಸುಲಿಗೆಗಾರರ
ದಂಡು ಅಲ್ಲ, ಸ್ವಾತಂತ್ರ್ಯ ಸಮರದ ಸೈನ್ಯ ಎಂದು ಸ್ಪಷ್ಟವಾಗಿ, ಆ ಎರಡು
ಪುಸ್ತಕಗಳ ಆಧಾರದಿಂದ "ಕಲ್ಯಾಣಪ್ಪನ ಕಾಟಕ್ಕಾಯಿ" ಎಂಬ (ಮೂರು ಗಂಟೆ)
ದೊಡ್ಡ ತುಳು ನಾಟಕ ಬರೆದಿದ್ದೆ. (ಪ್ರಕಟವಾಗಿಲ್ಲ-ಪ್ರದರ್ಶಿಸಲ್ಪಟ್ಟಿದೆ.) ಆ
ನಾಟಕವನ್ನೇ ಸಂಕ್ಷಿಪ್ತಗೊಳಿಸಿ, ಮಕ್ಕಳಿಗಾಗಿ ಕನ್ನಡ ನಾಟಕ ರೂಪಿಸಿದೆ.
ಪ್ರಾಯಸ್ಥರ ಅಭಿನಯಕ್ಕೆ ವಿಸ್ತೃತ ಕನ್ನಡ ಯಾ ತುಳು ನಾಟಕದ ಹಸ್ತಪ್ರತಿ
ಬೇಕಿದ್ದರೆ ಪತ್ರವ್ಯವಹಾರ ಮಾಡಬಹುದು. —ಲೇಖಕ.

# ಬಾಜೀರಾಯ ದೇಶಪಾಂಡೆ

**ಚಾರಿತ್ರಿಕ ನಾಟಕ**

[ಹಲವು ವರ್ಷಗಳ ಹಿಂದೆ ಓದಿದ ವೇ. ತಿ. ಗಳಗನಾಥರ ಕಾದಂಬರಿಗಳ ನೆನಪಿಗೆ, "ಶಿವಾಜಿ ಮಹಾರಾಜ್" ಎಂಬ ಹಿಂದಿ ನಾಟಕದ ಸನ್ನಿವೇಶಗಳನ್ನು ಜೋಡಿಸಿ "ಭಾರತ ಭಾರತಿ ಪುಸ್ತಕ ಸಂಪದ"-ದವರ "ಬಾಜಿ ಪ್ರಭು" ಕಥೆಯ ಪ್ರಕಾಶ ಬೀರಿ ಈ ಕಿರುನಾಟಕ ರಚಿಸಲಾಗಿದೆ. —**ಲೇಖಕ.**]

## ಪಾತ್ರವರ್ಗ ವಿವರ

1. ಬಾಜೀರಾಯ
2. ಶಿವಾಜಿ
3. ಈಸಾಜಿ
4. ದತ್ತಾತ್ರಾಮ ಪಂತ
5. ಕೊತವಾಲ
6. ಗುಪ್ತಚಾರಕ
7. ಪೂಜೆಯ ಭಟ್ಟರು

ಸೈನಿಕರು ಮತ್ತು ಜವಾನರು.

## ದೃಶ್ಯಗಳು

1. ದೇವಿ ಗುಡಿ
2. ಹಳ್ಳಿ ದಾರಿ
3. ಮರಾಠರ ಢೇರೆ.
4. ಶಿವಾಜಿಯ ಕೋಣೆ
5. ರಣರಂಗ

## 1ನೇ ದೃಶ್ಯ—ದೇವಿ ಮಂದಿರ

[ಭಟ್ಟರು ಪೂಜೆ ಮಾಡುತ್ತಿದ್ದಾರೆ. ಹೊರಗಡೆ ಬಾಜೀರಾಯ ವಂದಿಸಿ, ನಿಂತಿದ್ದಾನೆ. ಪೂಜೆ ಮುಗಿಸಿ ಆರತಿಯೊಡನೆ ಬಂದು ಭಟ್ಟರು ಪ್ರಸಾದ ಕೊಡುತ್ತಾ.]

**ಭಟ್ಟ**–ಕೀರ್ತಿವಂತರಾಗಿ, ದೀರ್ಘಾಯುಷ್ಯವಂತರಾಗಿ ಬಾಳುವಂತೆ ಭವಾನಿ ಕೃಪೆ ಮಾಡುತ್ತಾಳೆ.

**ಬಾಜಿ**–ಪೂಜ್ಯರೇ ನನ್ನ ದೀರ್ಘಾಯುಷ್ಯ ಕೀರ್ತಿಗಳಿಗಾಗಿ ನಾನು ದೇವರನ್ನು ಬೇಡಿಲ್ಲ. ಪ್ರಜೆಗಳ ಸುಖಶಾಂತಿಗಾಗಿ ಬೇಡುವೆ. ತಾವು ಅದನ್ನರಿಯದೆ...

**ಭಟ್ಟ**–ಅರಿತಿದ್ದೇನೆ ಪ್ರಭೂ. ಪ್ರಜೆಗಳು ನೆಮ್ಮದಿಯಿಂದ ಬಾಳುವಂತಾದರೆ ತಾವು ಅಪೇಕ್ಷಿಸದಿದ್ದರೂ ಕೀರ್ತಿ ತಾನೇ ಬರುತ್ತದೆ.

**ಬಾಜಿ**–ಅಂತಾದರೂ ದೀರ್ಘಾಯುಷ್ಯದ ಆಶೆಯೇ ಇಲ್ಲ.

**ಭಟ್ಟ**–ತಮಗೆ ಆಶೆ ಇಲ್ಲದಿರಬಹುದು. ಆದರೆ ನಮ್ಮ ಪ್ರಿಯ ದೊರೆ ದೀರ್ಘಕಾಲ ಬಾಳಬೇಕೆಂಬುದೇ ನಮ್ಮ ಆಶೆ.

**ಬಾಜಿ**–(ನಸುನಗುತ್ತ) ಚತುರರಿದ್ದೀರಿ. ತಮ್ಮಂತಹ ನಿಷ್ಠಾವಂತರ ಸೇವೆಯಿಂದ ಈ ಮಂದಿರಕ್ಕೇ ಪ್ರಕಾಶ ಒದಗಿದೆ. ಮಾತ್ರವಲ್ಲ ನಮ್ಮ ಮಾವಳಕ್ಕೇ ಮಂಗಳಕರವಾಗಿದೆ.

(ಮಂತ್ರಿ ದತ್ತಾತ್ರಾಮಪಂತ, ಕೊತವಾಲ, ಗುಪ್ತಚಾರ ನಾಯಕರು ಬರುವರು.)

**ಬಾಜಿ**–ಈಗ ತಾನೇ ದುರ್ಗಕ್ಕೆ ಹೊರಟಿದ್ದೆ ಪಂತರೇ, ಅಷ್ಟರೊಳಗೇ ಬಂದಿರಲ್ಲಾ?

**ಪಂತ**–ಗುಪ್ತಚಾರ ನಾಯಕ ಅವಸರದ ಸುದ್ದಿ ತಂದಿದ್ದ.....

**ಬಾಜಿ**–ಏನದು ಸುದ್ದಿ ನಾಯಕಾ?

**ನಾಯಕ**–ಪ್ರಭೂ....ಉತ್ತರ ಭಾಗದ ಗಡಿಯಲ್ಲಿ ಶಿವಾಜಿ ಮಹಾರಾಜರ ಸೈನ್ಯ ಜಮಾಯಿಸಿದೆ. ಇಷ್ಟರಲ್ಲೇ ಆಕ್ರಮಣ ನಡೆದಿರಬೇಕು.

**ಬಾಜಿ**–ಅಸಂಭವ. ಮರಾಠಾ ಸೈನ್ಯ ಬೇರೆತ್ತಲೋ ಸಾಗುತ್ತಿರಬೇಕು. ನಮಗೆ ತಿಳಿಸದೆ ಯುದ್ಧ ಹೂಡುವಷ್ಟು ಧರ್ಮಬಾಹಿರರು ಶಿವಾಜಿ ಮಹಾರಾಜರಲ್ಲ.

**ಕೊತ**–ತಮಗೆ ತಲುಪಿಸಲೆಂದು ನನ್ನ ಬಳಿ ಪತ್ರ ಒಂದನ್ನು ಕೊಟ್ಟಿದ್ದಾರೆ.

**ಬಾಜಿ**–ಪತ್ರವನ್ನು ಓದಿರಿ ಪಂತರೇ.

(ಪಂತರು ಪತ್ರ ತೆಗೊಂಡು ಬಿಡಿಸಿ ಓದುತ್ತಾರೆ)

ಪಂತ–"ಬಿಜಾಪುರ ಸುಲ್ತಾನರ ಅಧೀನದ ಹಿರಡಸ್ ಮಾವಳದ ಪಾಳೆಯಗಾರ ಬಾಜೀರಾಯ ದೇಶಪಾಂಡೆಯವರಿಗೆ ಶಿವಾಜಿ ಮಹಾರಾಜರು ತಿಳಿಸುವುದೇನೆಂದರೆ, ನೀವು ಆ ಮತಾಂಧ ಸುಲ್ತಾನರ ಸೇವೆಯನ್ನು ತೊರೆದು ನಮ್ಮೊಂದಿಗೆ ಸ್ವರಾಜ್ಯ ನಿರ್ಮಾಣ ಕಾರ್ಯದಲ್ಲಿ ಸಹಕರಿಸಬೇಕೆಂದು ಒಂದೆರಡು ಬಾರಿ ಸಂಧಾನ ಕಳಿಸಿದರೂ ನೀವು ಕಿವಿಗೊಡಲಿಲ್ಲ...."

ಬಾಜಿ–ಕಿವಿಗೊಡುವೆನೇ? ಹಿರಿಯರ ಕಾಲದಿಂದಲೂ ಸುಲ್ತಾನರ ಆಧೀನರಾಗಿದ್ದ ಪಾಳೆಯಗಾರ ವಂಶದಲ್ಲಿ ಜನಿಸಿದ ಸ್ವಾಮಿನಿಷ್ಠ ಬಾಜೀರಾಯನು ಶಿವಾಜಿಯ ವಂಚನೆಯ ಸಂಚಿಗೆ ಕಿವಿಗೊಟ್ಟು, ಸ್ವಾಮಿದ್ರೋಹಿಯಾದಾನೇ? ಇಲ್ಲ ಇಲ್ಲ.

ಪಂತ–(ಓದು ಮುಂದುವರಿಕೆ) "ನಮ್ಮ ನೆರೆಕರೆಯ ಹಿಂದೂ ಧರ್ಮ ಪ್ರಧಾನ ಪ್ರದೇಶಗಳು ಸುಲ್ತಾನರ ಕ್ರೂರ ಆಳ್ವಿಕೆಯಲ್ಲಿ ಚಡಪಡಿಸುತ್ತಿರುವುದು ನಮಗೆ ಸಹಿಸದಾಗಿದೆ...."

ಬಾಜಿ–ಓಹೋ, ಅವನ ಪ್ರಜೆಗಳನ್ನು ಜೀವಂತವಾಗಿ ಸ್ವರ್ಗಕ್ಕೊಯ್ದನೇ ಆ ಶಿವಾಜಿ?

ಪಂತ–ಇಲ್ಲವೇ ಇಲ್ಲ.

ಬಾಜಿ–ಅಂತಾದರೆ ಆ ವಾಕ್ಯಗಳು ಅವನ ಜಂಭವಲ್ಲವೇ ಪಂತರೇ ?

ಪಂತ–ಹೌದು ಪ್ರಭೂ....ಇನ್ನೂ ಓದಲು ಉಳಿದಿದೆ.

ಬಾಜಿ–ಓದಿರಿ,

ಪಂತ–"....ನಿಮ್ಮ ಅಧೀನದ ಮಾವಳವನ್ನು ಸುಲ್ತಾನ ಸೈನಿಕರ ಅತ್ಯಾಚಾರದ ದವಡೆಯಿಂದ ರಕ್ಷಿಸಲು ನಾವು ಯುದ್ಧ ಸನ್ನದ್ಧರಾಗಿದ್ದೇವೆ...."

ಬಾಜಿ–ನಮ್ಮ ಮಾವಳದ ಮೇಲೆ ಶಿವಾಜಿಯ ಯುದ್ಧವೇ, ಹೂಂ, ನಡೆಯಲಿ.... ನಮ್ಮ ಒರೆಯಲ್ಲೂ ಖಡ್ಗವಿದೆ.

(ಒರೆಯಿಂದ ಖಡ್ಗ ಅರ್ಧಕ್ಕೆಳೆಯುವನು)

ಪಂತ–ಪ್ರಭೂ ಇನ್ನೂ ಒಂದು ವಾಕ್ಯ ಉಳಿದಿದೆ.

ಬಾಜಿ–ಮುಗಿಸಿರಿ ಆ ಅಹಂಕಾರಪೂರ್ತಿ ವಾಕ್ಯಗಳನ್ನು.

(ಖಡ್ಗವನ್ನು ಗರಕ್ಕನೆ ಒರೆಗೆ ಸೇರಿಸುವನು)

ಪಂತ–...."ನೀವು ವಿಚಾರವಂತರಾಗಿದ್ದರೆ ಇನ್ನಾದರೂ ನಮಗೆ ಸ್ನೇಹ ಹಸ್ತ ನೀಡಿರಿ. ಇಲ್ಲವಾದರೆ ರಣರಂಗದಲ್ಲಿ ಎದುರಾಗಿರಿ."

**ಬಾಜಿ**–ಸಿದ್ಧನಾಗಿಯೇ ಇದ್ದೇನೆ. ಸುಲ್ತಾನರ ಆಧೀನವೆಂಬ ಕುಂಟು ನೆವ
ಹೂಡಿ, ನೆರೆರಾಜ್ಯದ ಆಕ್ರಮಣಕ್ಕೆ ಮುಂದಾಗಿರುವ ಶಿವಾಜೀ....ನಿನ
ಎದುರಾಗಲು ಸಿದ್ಧನಾಗಿಯೇ ಇದ್ದೇನೆ. (ಖಡ್ಗ ಹಿಡಿದು) ಜೈ ಭವಾನಿ.

(ಧಾವಿಸುವನು, ಪಂತರೂ ಸಾಗುವರು, ಗುಪ್ತಚಾರನೂ ಕೊತವಾಲನೂ
ನಿಧಾನ ಸಾಗುವರು. ಭಟ್ಟರು ಗಾಬರಿಯಾಗಿ ನಿಂತು ನೋಡುತ್ತಿರುವರು.)

---

## 2ನೇ ದೃಶ್ಯ—ಹಳ್ಳಿ ದಾರಿ.

[ಗುಪ್ತಚಾರ ತ್ವರಿತವಾಗಿ ಸಾಗುತ್ತಿರುವಾಗ ಕೊತವಾಲ ಹಿಂದಿನಿಂದ ಕರೆಯುವುದು]

**ಕೊತ**–ಲೋ....ಲೋ....ನಿಲ್ಲೋ....ಅವರು ತುರ್ತಾಗಿ ಹೋದರೂಂತ ನೀನು
ಯಾಕೆ ಓಡ್ತೀಯಾ? ನಿಧಾನ...ನಿಧಾನಾ....

**ನಾಯಕ**–ಗಡಿಯಲ್ಲಿ ಯುದ್ಧವಾಗುತ್ತಿರುವಾಗಲೂ ನಾವು ಇಲ್ಲಿ ಹರಟೆ ಹೊಡೆಯು
ತ್ತಿರೋದಾ?

**ಕೊತ**–ಗಡಿಯಲ್ಲಿ ಗಡಿಬಿಡೀಂತ ನೀನೇಕೆ ಬಡಬಡಿಸ್ತಿಯಾ? ಹೇಗೂ ಇಷ್ಟು ದೂರ
ಬಂದಿದ್ದೀವಿ, ಇಲ್ಲೇ ಹಳ್ಳಿ-ಗಿಳ್ಳೀ ಇಳಿದು ಹೆಂಡಾ-ಗಿಂಡಾ ಇದ್ರೆ ಒಸಿ
ಕುಡ್ಕೊಂಡು ಹೋಗೋಣ.

**ನಾಯು**–ಲೋ ಮುಠ್ಠಾಳ, ಈ ಹೊತ್ತಿನಲ್ಲೂ ಹೆಂಡ ಕುಡಿದು ಅಂಡಲೆದರೆ ತಲೇನೆ
ದಂಡ ತೆರಬೇಕಾದೀತು.

**ಕೊತ**–ಹೆಂಡ ಕುಡಿದ್ಮೇಲೆ ತಲೆ ಹೋದರೂ ಚಿಂತಿಲ್ಲ. ಹೊಟ್ಟೆಯಲ್ಲಿರೊ ಹೆಂಡ,
ತಲೆ ತುಂಡಾದ ಮನುಷ್ಯನನ್ನು ಸಾಯಲಿಕ್ಕೆ ಬಿಲ್ಕುಲ್ ಬಿಡೋಲ್ಲ.

**ನಾಯು**–ಅಲ್ಲಾ ನಿನ್ನಂತಹ ವೊಂಡು ಬುದ್ಧಿಯ ಹೆಂಡ ಕುಡುಕನಿಗೆ ಕೊತವಾಲಗಿರಿ
ಕೊಟ್ಟಿದ್ದಾರಲ್ಲಾ....ಅಲ್ಲೇ ತಪ್ಪಿದ್ದಾರೆ ಪ್ರಭುಗಳು.

**ಕೊತ**–ನಾನು ಹೆಂಡ ಕುಡಿವ ವಿಶ್ಯ, ಪ್ರಭುಗಳಿಗೆ ಬಿಡು-ಒಂದು ನುಸಿಗೂ
ಗೊತ್ತಿಲ್ಲ ಕಣೋ.

**ನಾಯು**–ಹೌದಾ....! ನಿನ್ನ ಹೆಂಡತಿಗೂ ಗೊತ್ತಿಲ್ವಾ?

ಕೊತ-ಹೆಂಡ್ತಿಗೆ ಗೊತ್ತಿದ್ರೂ, ಗಂಡ ಹೆಂಡ ಕುಡ್ಕಾಂತ ಹೆಂಡ್ತಿ ಯಾರಲ್ಲೂ ಹೇಳ್ತಾಳೇನೋ ಮಂಗಾ....? ಅವಳೊಬ್ಬಳಿಗೆ ಬಿಟ್ಟು ಬೇರೆ ಯಾರಿಗೂ ಗೊತ್ತಿಲ್ಲ.

ನಾಯಂ-ನಿನ್ನ ನೆರೆಕರೆಯವರಿಗೆ ಗೊತ್ತಿರ್ಲೇಬೇಕು.

ಕೊತ-ಥೂ....ನೆರೆಕರೆಯವರಿಗೆ ಗೊತ್ತಿದ್ರೇನಾಯ್ತು? ನಾನು ಕೊತವಾಲನಲ್ವೇ. ನನ್ಗೆ ಹೆದ್ರಿ ಅವರು ಯಾರೂ ಗುಟ್ಟು ಬಿಡೋಲ್ಲ. ಅವರನ್ನುಳಿದು ಬೇರೆ ಒಂದೇ ಒಂದು ನರಪ್ರಾಣಿಗೂ ಗೊತ್ತಿಲ್ಲ.

ನಾಯಂ-ನಿನ್ನ ಕೊತ್ತಳದ ಜವಾನರಿಗೆ ಗೊತ್ತುಂಟಲ್ಲಾ...

ಕೊತ-ಲೋ ಮಂಗಾ...ನನ್ನ ಕೈಕೆಳಗಿನ ಜವಾನರಿಗೆ ಗೊತ್ತಿದ್ರೆ ಅವರು ಸುದ್ದಿ ಹೇಳ್ತಾರೇನೋ...? ಅವರ ನಾಲಗೆ ಕ್ಯೊದೇನು. ಜವಾನರ ಸುದ್ದಿ ಬಿಡು, ಬೇರೆ ಯಾವ ಜೀವರಾಶಿಗೂ ಗೊತ್ತಿಲ್ಲ.

ನಾಯಂ-ನೀನು ಕಂಠಪೂರ್ತಿ ಕುಡಿದು ಅತ್ತಿತ್ತ ಹೋದಾಗ, ವಾಸನೆ ಬಡಿದು, ನಿನ್ನ ಊರವರೆಲ್ಲರಿಗೂ ಗೊತ್ತಾಗಿದೆ.

ಕೊತ-ಅಲ್ಲಾ, ನನ್ನ ಊರವರಿಗೆ ಗೊತ್ತಾದ್ರೆ ಅವರು ನನ್ನ ಕುರಿತು ಚಕಾರ ಎತ್ತೋದಿಲ್ಲ. ಊರವರಿಗೆ ಬಿಟ್ಟು ಇನ್ನಾರಿಗೂ ಗೊತ್ತಿಲ್ಲ.

ನಾಯಂ-ಗೊತ್ತು ಎಲ್ಲರಿಗೂ ಇದೆ. ನಿನಗೇ ಗೊತ್ತಿಲ್ಲದ್ದು. ನಿನ್ನಂತಹ ಹೆಂಡದ ಹಂಡೆ ಕೊತವಾಲನಾದ್ರೆ ಕೊತ್ತಳ ಕೆಡವಿಬಿದ್ದರೂ ಗೊಡವೆಯಾಗದು ನಿನ್ನ ವಿಷಯ ಪ್ರಭುಗಳಿಗೆ ತಿಳಿಸಲೇ ಬೇಕು. (ಹೋಗುವನು.)

ಕೊತ-ನಿಲ್ಲೋ ಮಹರಾಯಾ....ಹಾಗೆ ದುಡುಕ್ಬೇಡ ಕಣೋ...ಅರೇ ಕರ್ಮವೇ ಹೋಗಿಯೇ ಬಿಟ್ಟನಲ್ಲಾ. ಥೂ! ಹೆಂಡ ಕುಡಿಯುವವರಿಗೆ ಬುದ್ಧಿಯೇ ಇಲ್ಲ. ಅಂಥವರ ಬಾಳೇ ದಂಡ. (ಕೊತವಾಲನೂ ಸಾಗುವನು)



## 3ನೇ ದೃಶ್ಯ—ದೇವಿ ಮಂದಿರ

[ನಿರ್ಜನ ಮಂದಿರ, ಶಿವಾಜಿಯು ಕೆಲವು ಸೈನಿಕರೊಂದಿಗೆ ಪ್ರವೇಶಿಸಿ ದೇವಿಗೆ ಭಕ್ತಿಯಿಂದ ವಂದಿಸುವನು.]

**ಶಿವಾಜಿ**—ವೈರಿಸೈನಿಕರು ಎಲ್ಲಾದರೂ ಅಡಗಿದ್ದಾರೋ ಹುಡುಕಿರಿ.

(ಸೈನಿಕರು ಹುಡುಕುತ್ತಾ ಒಳಗೆ ಹೋಗುತ್ತಾರೆ. ಶಿವಾಜಿ ಮಂದಿರದ ವಿನ್ಯಾಸಗಳನ್ನು ನೋಡುತ್ತಾ ಇರುವಾಗ ಸೈನಿಕರು ಒಳಗಿಂದ ಬಂದು)

**ಸೈನಿಕ**—ಒಳಗಡೆ ಯಾರೂ ಇಲ್ಲ ಪ್ರಭೂ.

(ಹೊರಗಿನಿಂದ ಕೈಬುಟ್ಟಿಯಲ್ಲಿ ಹೂ ತುಂಬಿಕೊಂಡು ಭಟ್ಟರು ಪ್ರವೇಶಿಸಿ ಸೈನಿಕರನ್ನು ಕಂಡು ಹೆದರಿ ಹೂಬುಟ್ಟಿ ಕೆಳಗೆ ಬೀಳುವುದು, ಸೈನಿಕರು ಭಟ್ಟರ ಸುತ್ತಲೂ ನಿಲ್ಲುತ್ತಾರೆ )

**ಶಿವಾ**—ಆ....ಮುಟ್ಟ ಬೇಡಿ ಅವರನ್ನು ಇತ್ತ ನಿಲ್ಲಿ.

(ಸೈನಿಕರು ಬದಿಗೆ ಸರಿದು ನಿಲ್ಲುತ್ತಾರೆ)

**ಶಿವಾ**—ಪೂಜ್ಯರೇ ಹೆದರಬೇಡಿ. ನಾವು ಈ ಪ್ರದೇಶಕ್ಕೆ ಆಕ್ರಮಣ ಗೈದವರಾದರೂ ಪ್ರಜೆಗಳನ್ನು ಹಿಂಸಿಸಲಾರೆವು. ಅದರಲ್ಲೂ ಸ್ತ್ರೀಯರು, ಸಾಧುಗಳು, ಬ್ರಾಹ್ಮಣರು, ರಣರಂಗದಲ್ಲೂ ಪೂಜ್ಯರೇ ಆಗಿದ್ದಾರೆ.

(ಕಂಪಿಸುವ ಕೈಗಳಿಂದ ಭಟ್ಟರು ವಂದಿಸುತ್ತಾರೆ)

**ಶಿವಾ**—ಹೆದರಬೇಡಿ. ಹೋಗಿ ದೇವತಾ ಕಾರ್ಯ ಸಾಗಲಿ.

(ಭಟ್ಟರು ಎರಡು ಹೆಜ್ಜೆ ಸರಿದಾಗ)

**ಶಿವಾ**—ನೋಡಿ! (ಭಟ್ಟರು ತಿರುಗಿ ನೋಡಿದಾಗ) ತಪ್ಪಿಸಿ ಹೊರಗೆ ಹೋಗಲು ಮಾತ್ರ ಯತ್ನಿಸಬೇಡಿ!

**ಭಟ್ಟ**—ಇಲ್ಲ. ಈ ದೇವೀ ಸಾನ್ನಿಧ್ಯ ಬಿಟ್ಟು ಹೋಗಲಾರೆ.

**ಶಿವಾ**—ಸರಿ, ಹೋಗಿರಿ,

(ಭಟ್ಟರು ಒಳ ಹೋಗುತ್ತಾರೆ. ಹೊರಗಿನಿಂದ ಈಸಾಜಿಯೂ ಸೈನಿಕರೂ ಬರುತ್ತಾರೆ)

**ಶಿವಾ**—ಏನಾಯಿತು ಈಸಾಜೀ?

**ಈಸಾಜಿ**—ಭಯಂಕರ ಯುದ್ಧ ನಡೆಯುತ್ತಿದೆ ಮಹಾರಾಜರೇ. ಬಾಜೀರಾಯರ ಯುದ್ಧ ಸಾಮರ್ಥ್ಯ ನನ್ನನ್ನು ದಂಗುಬಡಿಸಿದೆ. ಅವರ ಸಿಂಹಘರ್ಜನೆ....

ಆ ಬಲಿಷ್ಟ ದೇಹದ ಸೆಣಸಾಟ....ಆ ನೀಳ ತೋಳುಗಳ ಬೀಸಾಟದ ರಭಸ, ಛೆ! ಛೆ! ಅಸಾಧಾರಣ, ಅಪ್ರತಿಮ.

ಶಿವಾ–ಹಿಂದೆ ಎರಡು ಭಾರಿ ಅವರ ಸಾಮರ್ಥ್ಯವನ್ನು ಯುದ್ಧರಂಗದಲ್ಲಿ ಕಂಡು ನಾನು ಮೆಚ್ಚಿಯೇ ಅವರನ್ನು ನಮ್ಮೆಡೆಗೆ ಒಲಿಸಿಕೊಳ್ಳಲು ಯತ್ನಿಸಿದ್ದೇನೆ.

ಈಸಾ–ಕೊಂದಲ್ಲದೆ ಬಾಜಿಯವರನ್ನು ಬಂಧಿಸಲು ಸಾಧ್ಯವಾಗದು ಪ್ರಭೂ,

ಶಿವಾ–(ಕೋಪದಿಂದ) ಈಸ್ಹಾಜೀ...! ಸಾಧ್ಯವಿಲ್ಲವೆಂಬ ಮಾತು ಮರಾಠರ ಬಾಯಿಯಿಂದ ಬರಬಾರದು. ಬಾಜಿಯವರಂತಹ ಧರ್ಮನಿಷ್ಠ, ಸ್ವಾಮಿನಿಷ್ಠ, ಸಾಮರ್ಥ್ಯವಂತ ವೀರರನ್ನು ಕೊಲ್ಲುವುದಾದರೆ, ನಮಗೆ ಯುದ್ಧವೇ ಅಗತ್ಯವಿಲ್ಲ ಅವರ ಕೂದಲು ಕೊಂಕದಂತೆ, ಜೀವಂತ ಹಿಡಿದು ತರಬೇಕು.

ಈಸಾ–ಇನ್ನೊಮ್ಮೆ ಯತ್ನಿಸುತ್ತೇನೆ.

ಶಿವಾ–ಯತ್ನಿಸುತ್ತೇನೆಂದಲ್ಲ, ಹಿಡಿದು ತರಲೇ ಬೇಕು. ಶಕ್ತಿಯಲ್ಲಿ ಅಸಾಧ್ಯವಾದರೆ ಯುಕ್ತಿಯನ್ನುಪಯೋಗಿಸು.

ಈಸಾ–ದೇವಿ ಕೃಪೆ ಇದ್ದರೆ ಖಂಡಿತ ಹಿಡಿದು ತರುತ್ತೇನೆ.

ಶಿವಾ–ಆ....ಅದು ಮರಾಠ ಸರದಾರನ ಮನೋನಿರ್ಧಾರ!

ಈಸಾ–ಬರುತ್ತೇನೆ ಪ್ರಭೂ.....

(ಹೋಗುವನು. ಒಳಗಿಂದ ಭಟ್ಟರ ಮಂತ್ರೋಚ್ಚಾರಣೆ ಕೇಳಿಬರುತ್ತದೆ. ಶಿವಾಜಿ ದೇವಿ ಮೂರ್ತಿಯನ್ನೇ ನೋಡುತ್ತಿದ್ದಾನೆ)

---

## 4ನೇ ದೃಶ್ಯ—ರಣರಂಗ

[ಯುದ್ಧದ ಗಲಾಟೆ, ಕತ್ತಿಗಳ ಝಣತ್ಕಾರ, ಕೂಗಾಟ, ಚೀರಾಟ ಕೇಳುತ್ತದೆ. ಸೈನಿಕರ ಓಡಾಟ, ಕತ್ತಿವರಸೆ ನಡೆಯುತ್ತದೆ. ನಾಲ್ಕಾರು ಸೈನಿಕರೊಡನೆ ಕಾದುತ್ತಲೇ ಬಾಜೀರಾಯ ಸಾಗುತ್ತಾನೆ. ತುಸು ಹೊತ್ತು ರಂಗ ಖಾಲಿ. ಹಿಂದಿನ ಶಬ್ದಗಳೂ ಕಡಿಮೆಯಾಗುತ್ತವೆ. ಮೂವರು ಸನ್ಯಾಸಿಗಳನ್ನು ಸೈನಿಕರು ಹಿಡಿದು ಎಳೆದು ತರುತ್ತಾರೆ.]

ಸನ್ಯಾಸಿ–ಅಯ್ಯೋ ರಕ್ಷಿಸಿರಿ, ರಕ್ಷಿಸಿರಿ, ಕೊಲ್ಲುತ್ತಾರೆ....ರಕ್ಷಿಸಿರಿ. ಭಗವಂತಾ ರಕ್ಷಿಸೊ....

(ಒದರುತ್ತಾ ಒಬ್ಬ ಸನ್ಯಾಸಿ ಬೀಳುತ್ತಾನೆ. ದೂರದಿಂದ ಕಂಡ ಬಾಜೀರಾಯ

ಧಾವಿಸಿ ಬರುತ್ತಾನೆ. ಸೈನಿಕರು ಸನ್ಯಾಸಿಗಳನ್ನು ಬಿಟ್ಟು ಓಡುತ್ತಾರೆ. ಬಾ
ಸನ್ಯಾಸಿಯ ಬಳಿ ಮೊಣಕಾಲೂರಿ ಎಬ್ಬಿಸಲೆತ್ನಿಸುತ್ತಿರುವಾಗ ಹಿಂದಿನಿಂದ ನಾಲ್ಕಾರ
ಸೈನಿಕರು ಧಾವಿಸಿ, ಬಾಜಿಯನ್ನು ಹಿಡಕೊಳ್ಳುತ್ತಾರೆ, ಸನ್ಯಾಸಿಗಳೂ ಕೂಡಿ ಕಟ
ಹಾಕುತ್ತಾರೆ. ಬಾಜಿ ಸೆಣಸಾಡುತ್ತಾ)

**ಬಾಜಿ**–ಥೂ ನೀಚರೇ........ಸಾಧುಸಂತರ ವೇಶದಲ್ಲೂ ಮೋಸವೆ? ಧರ್ಮಕ್ಕೆ
ಅಪಚಾರ....(ಸೆಣಸಾಡುತ್ತಾ ಮುಂದೆ ನುಗ್ಗಿ ಸನ್ಯಾಸಿಯ ಗಡ್ಡ ಹಿಡಿದೆ
ದಾಗ ಗಡ್ಡ ಕೈಗೇ ಬಂದು ಈಸಾಜಿಯ ಗುರುತು ಹಿಡಿಯುತ್ತದೆ)

**ಬಾಜಿ**–ನೀನು?! ಈಸಾಜಿ? ವಂಚಕಾ...ನನ್ನೊಡನೆ ಹೋರಾಡಿ ಸೋಲಿಸಲಾರ
ಮೋಸಕ್ಕೆ ಮೊರೆಹೋದೆಯಾ? ಇದೇನೋ ನಿನ್ನ ಸಾಮರ್ಥ್ಯ? ಇದೇನೋ
ನಿನ್ನ ಶಿವಾಜಿಯ ಯುದ್ಧ ನೀತಿ? ಥೂ....!

(ಮಾತಾಡುತ್ತಿದ್ದಂತೆ ಬಾಜಿಯನ್ನು ಎಳಕೊಂಡು ಹೋಗುತ್ತಾರೆ)

---

## 5ನೇ ದೃಶ್ಯ—ಹಳ್ಳಿ ದಾರಿ.

[ಕೊತವಾಲ ಕುಡಿದು ಮಾಲುತ್ತಾ ಬರುತ್ತಾನೆ]

**ಕೊತ**–ಈ ಊರೇನೋ ಒಳ್ಳೇಯದು. ಸಲೀಸಾಗಿ ಹೆಂಡ ಸಿಗುತ್ತೆ....ಆದರೆ....ದಾ
ಸರಿ ಇಲ್ಲ. ಎಲ್ಲ ಹಳ್ಳ-ದಿಣ್ಣೆ, ಏರು-ತಗ್ಗುಗಳೇ ಇರೋದು. ನಡೆದ
ನಡೆದು ತಲೆ ಭಾರವಾಗಿದೆ. (ಸೊಂಟದ ಶಾಲು ಬಿಚ್ಚಿ ನೆಲದಲ್ಲಿ ಹಾಸಿ
ಬಟ್ಟೆಯನ್ನು ಬಿಟ್ಟು ಅತ್ತಕಡೆ ಕುಳಿತುಕೊಳ್ಳುತ್ತಾನೆ. ಕಲ್ಲು ಒತ್ತಿದಂತಾಗಿ

**ಕೊತ**––ಎಲಾ ಕರ್ಮವೆ...ಕಲ್ಲು ಒತ್ತಬಾರದೆಂದು ಬಟ್ಟೆ ಹಾಸಿದೆ. ಬಟ್ಟೆಯ
ಮೇಲೆ ಕಲ್ಲು ಹೇಗೆ ಬಂತು?...ಇಲ್ಲೇನೋ ಭೂತದ ಉಪದ್ರವಿರಬೇಕು
(ಗುಪ್ತಚಾರಕ ಬರುತ್ತಾನೆ)

**ನಾಯು**–ಲೋ ಕೊತವಾಲಾ...ಇದೇನೋ ಈ ಕಡೆ ಬಟ್ಟೆಹಾಸಿ, ಆದರ ಮೇ
ಕುಳಿತುಕೊಳ್ಳದೆ ಆ ಕಡೆ ಕುಳಿತಿದ್ದೀಯಲ್ಲಾ?

**ಕೊತ**–ನಿನಗೆ ಮಂಗನಿಗೆ ಕಣ್ಣು ಕಾಣೋದಿಲ್ಲ? ಬಟ್ಟೆಯ ಮೇಲೆಯೇ ಕುಳಿತಿದ್ದೇನೆ

**ನಾಯು**–ಸರೀ ನೋಡು.

ಕೊತ-(ಸರಿ ನೋಡಿ) ಅ ರೆ ರೆ ರೆ ನಾನು ಬಟ್ಟೆಯ ಮೇಲೆಯೇ ಕುಳಿತಿದ್ದೇನೆ. ಬಟ್ಟೆ ಹೇಗೆ ಅತ್ತ ಸರಿಯಿತು? ಇದು ಪ್ರೇತಗಳ ಮೋಸವೇ ಆಗಿರಬೇಕು.

ನಾಯ-ನಿನ್ನ ತಲೆ......ಲೊ......ಯುದ್ಧ ಮುಗಿದು ಎಲ್ಲರೂ ಹೋಗಿ ಆಯಿತು. ನೀನೇಕೋ ಇಲ್ಲೇ ಇದ್ದೀ?

ಕೊತ-ಬುದ್ಧಿ ಇದ್ದವರು ಈ ಊರು ಬಿಟ್ಟು ಹೋಗಲಾರರು.

ನಾಯ-ಅದೇನು?

ಕೊತ-ಅಂದರೆ ಇಷ್ಟು ಸಲೀಸಾಗಿ ಬೇರೆಲ್ಲಿಯೂ ಹೆಂಡ ಸಿಗೋದಿಲ್ಲ ಕಣೋ.

ನಾಯ-ಓಹೋ ಹಾಗೆ...ಹೆಂಡ ಸಿಕ್ಕಿದರೆ ನಿನಗೆ ಹೆಂಡತಿ, ಮಕ್ಕಳು, ನೌಕರಿ ಚಾಕರಿ ಏನೂ ಬೇಡಾಂತ ಕಾಣುತ್ತೆ ಅಲ್ವೆ?

ಕೊತ-ನೋಡು, ಮೊದಲು ಹೆಂಡ, ಆ ಮೇಲೆ ಹೆಂಡತಿ, ನಂತರ ಸಮಯವಿದ್ದರೆ ನೌಕರಿ, ಚಾಕರಿ, ಪೋಕರಿ, ಗೀಕರಿ ಎಲ್ಲ.

ನಾಯ-ಛಿ! ಏಳೋ, ನಮ್ಮ ಬಾಜೀಪ್ರಭುಗಳನ್ನೇ ವೈರಿಗಳು ಹಿಡಿದುಕೊಂಡು ಹೋದರು ಕಣೊ.

ಕೊತ-ಹೌದಾ?! ನಿಜವಾಗಿಯೂ, ಹೆಂಡದಾಣೆಗೂ.

ನಾಯ-ಥೂ ಭಂಡಾ...ನಿನ್ನಂತಹ ಹೆಂಡಕುಡುಕ ಕೊತವಾಲರಿದ್ದುದರಿಂದಲೇ ಪ್ರಭುಗಳು ಸೋಲಬೇಕಾಯಿತು.

ಕೊತ-ನಿನಗಷ್ಟೇ ಗೊತ್ತು ಬಡ್ಡು ಬಸವಾ.........ಪ್ರಭುಗಳೂ ಹೆಂಡ ಕುಡಿದು ಯುದ್ಧಕ್ಕೆ ಹೋಗುತ್ತಿದ್ದರೆ ಸೋಲಾಗುತ್ತಿರಲಿಲ್ಲ. ಹೆಂಡ ಕುಡಿಯದೆ ಮಾಡಿದ ಕೆಲಸವೇ ದಂಡ.

ನಾಯ-ಏ ಚಾಂಡಾಲಾ....ಊರು ಸೂರೆಯಾದರೂ ನಿನಗೆ ಎಚ್ಚರವಾಗೋದಿಲ್ಲ. ನೀನು ಇಲ್ಲೇ ಬಿದ್ದಿರು. (ಸೀದಾ ಹೋಗುತ್ತಾನೆ)

ಕೊತ-ಹುಂ, ನನ್ನನ್ನು ಬಿಟ್ಟೇಹೋದ...ಮಂಕು ದಿಣ್ಣೆ. ಇನ್ನು ಒಸಿ ಕುಡಿದು ನಡೆದರೆ ಅವನಿಂದ ಮುಂದಾಗಿ ತಲಪಬಹುದು.

(ಮಾಲುತ್ತಾ ಹೋಗುವನು)

---

## 6ನೇ ದೃಶ್ಯ—ಶಿವಾಜಿಯ ಕೋಣೆ.

[ಮಂಚದಲ್ಲಿ ಶಿವಾಜಿ ಒರಗಿದ್ದಾನೆ. ಈಸಾಜಿಯೂ ಇತರ ಸೈನಿಕರೂ ಸರಪಳಿ ಬಿಗಿ
ಬಾಜೀರಾಯನನ್ನು ಎಳೆದು ತರುತ್ತಾರೆ. ಶಿವಾಜಿ ಎದ್ದು ನಿಂತು]

**ಶಿವಾ**—ವೀರಾಗ್ರೇಸರ ಬಾಜೀರಾಯ ದೇಶಪಾಂಡೆಯವರಿಗೆ ವಂದನೆಗಳು.

**ಬಾಜಿ**—ನಿನ್ನ ವಂದನೆಗೆ ಬೆಂಕಿಹಾಕಿತು. ಧರ್ಮಯುದ್ಧದಲ್ಲಿ ನನ್ನೊಡನೆ ಕಾದಾ
ಲಾರದೆ, ನನ್ನನ್ನು ಮೋಸದಿಂದ ಬಂಧಿಸಿ, ಈಗ ವಂದಿಸಿ ಹಂಗಿಸುವೆಯ
ವಂಚಕಾ..ಥೂ!

**ಶಿವಾ**—ಕೋಪಿಸಬೇಡಿ. ನೀವು ಮಹಾ ಶೂರರೆಂದು ನಾನು ಒಪ್ಪಿಕೊಂಡೆ. ಕಾದಾ
ನಿಮ್ಮನ್ನು ಸೋಲಿಸಲಾಗದೆಂದೂ ಗೊತ್ತಿದೆ.

**ಬಾಜಿ**—ಅದಕ್ಕಾಗಿ ವಂಚನೆಯ ಸಂಚು ಹೂಡಿದೆಯಾ? ಜೀವ ಹೋದರ
ನಾನಂತಹ ವಂಚನೆ ಮಾಡಲಾರೆ,

**ಶಿವಾ**—ನನ್ನ ಸ್ವಾರ್ಥಕ್ಕಾಗಿ ವಂಚಿಸಲಿಲ್ಲ ಬಾಜೀರಾಯರೇ. ನಿಷ್ಠಾವಂತ ಶೂರರಾ
ನಿಮ್ಮನ್ನು ಮತಾಂಧ ಸುಲ್ತಾನರ ಸೇವೆಯಿಂದ ಬಿಡುಗಡೆಗೊಳಿಸಲಿಕ್ಕಾಗಿಯೆ
ಬಂಧಿಸಿದೆವು.

**ಬಾಜಿ**— ಧರ್ಮಯುದ್ಧದಲ್ಲಿ ನನ್ನೊಡನೆ ಕಾದಾಡಲಾರದ ಹೇಡಿಯೇ, ಅಧಿ
ಪ್ರಸಂಗ ನಿಲ್ಲಿಸು.

**ಶಿವಾ**—ದುಡುಕಬೇಡಿ. ನನ್ನೊಬ್ಬನಿಂದಾಗಲೀ, ಇನ್ನೊಬ್ಬನಿಂದಾಗಲೀ, ನಿಮ್ಮೊಡ
ಹೋರಾಡಲು ಸಾಧ್ಯವಿಲ್ಲವಾದರೂ, ನಮ್ಮ ಸೈನ್ಯಬಲದೊಡನೆ ನಿಮ್ಮಾ
ವೇನೂ ಸಾಗದು ದೇಶಪಾಂಡೆಯವರೇ.

**ಬಾಜಿ**—ಕಾದಾಡಿ ರಣರಂಗದಲ್ಲಿ ಮಡಿಯುವೆನಲ್ಲದೆ, ಹೇಡಿಯಾಗಿ ಓಡಲಾರೆ.

**ಶಿವಾ**—ಈಗ ನಿಮ್ಮನ್ನು ಮರಣದಿಂದ ರಕ್ಷಿಸಿದ್ದೇವಲ್ಲ.

**ಬಾಜಿ**—ಥೂ! ನಿನ್ನ ಬಂಧಿಯಾಗಿ ನರಕ ಯಾತನೆ ಅನುಭವಿಸುವುದಕ್ಕಿಂತ, ರಣ
ರಂಗದಲ್ಲಿ ಮಡಿವ ವೀರಸ್ವರ್ಗವೇ ಲೇಸು.

**ಶಿವಾ**—ನಿಮ್ಮ ಆ ಗುಣಕ್ಕೇ ನಾನು ಮೆಚ್ಚಿದುದು. ನಿಮ್ಮ ಸಾಮರ್ಥ್ಯವೇ ನನ್ನನ್ನು
ಆಕರ್ಷಿಸಿತು.

**ಬಾಜಿ**—ನನ್ನ ಮತ್ತಾವ ಗುಣ ನಿನ್ನನ್ನು ವಂಚಕನನ್ನಾಗಿ ಮಾಡಿತು?

ಶಿವಾ–ಚುಚ್ಚುನುಡಿಗಳನ್ನಾಡಬೇಡಿ ದೇಶಪಾಂಡೆಯವರೇ........ನಿಮ್ಮನ್ನು ಶಿಕ್ಷಿಸಲಿಕ್ಕಾಗಿ ಬಂಧಿಸಿದ್ದಲ್ಲ. ನಿಮ್ಮನ್ನು ಸತ್ಕರಿಸಿ, ಗೌರವಿಸಿ ಅಧಿಕಾರ ನೀಡಲು ಬಂಧಿಸಿದ್ದೇವೆ.

ಬಾಜಿ–ನೀನು ಅಧಿಕಾರ ಕೊಡುವಿ ಎಂಬಾಶೆಯಿಂದ ನಾನು ಜೀವದಾನ ಬೇಡುವೆನೆಂದು ಬಗೆದೆಯಾ?........ಇಲ್ಲವೇ ಇಲ್ಲ.

ಶಿವಾ–ನೀವು ಜೀವದಾನ ಬೇಡಿದರೆ ನಾನು ಕೊಡುತ್ತಿರಲೂ ಇಲ್ಲ. "ಬೇಡಲಾರೆ" ನೆಂಬ ನಿಮ್ಮ ಸ್ವಾಭಿಮಾನ ಗುಣಕ್ಕಾಗಿಯೇ ನಿಮ್ಮನ್ನು ಜೀವಂತವಾಗಿ ರಕ್ಷಿಸಬೇಕಾಗಿದೆ.

ಬಾಜಿ–ನಾನು ಬದುಕಿ ಉಳಿದರೆ ಎಂದಾದರೂ ನಿನ್ನ ಸೇಡುತೀರಿಸದಿರಲಾರೆ.

ಶಿವಾ–ನನಗದರಲ್ಲಿ ಭಯವಿಲ್ಲ. ಪವಿತ್ರ ಭಾರತದಲ್ಲಿ ಮತಾಂಧ ಮ್ಲೇಂಛರು ರಾಜ್ಯ ಸ್ಥಾಪಿಸಿ, ಪ್ರಜೆಗಳ ಕುಲಗೆಡಿಸಿ, ಸ್ತ್ರೀಯರ ಮಾನಗೆಡಿಸಿ, ಸಾಧು ಸಂತರನ್ನು ಹಿಂಸಿಸಿ, ಮಠಮಂದಿರಗಳನ್ನು ಅಪವಿತ್ರಗೊಳಿಸಿ ಗೋವುಗಳನ್ನು ಕೊಂದು ತಿನ್ನತೊಡಗಿದ್ದಾರೆ. ಆ ಮತಾಂಧರ ಕೈಯಿಂದ ಭಾರತವನ್ನು ರಕ್ಷಿಸಲು ಹೋರಾಡುತ್ತಿದ್ದೇನೆ.

ಬಾಜಿ–ಅದು ಕೇವಲ ನಿನ್ನ ಕನಸು. ನಿನ್ನಿಂದ ಎಂದೆಂದಿಗೂ ಸಾಧ್ಯವಿಲ್ಲ.

ಶಿವಾ–ನನ್ನಿಂದ ಸಾಧ್ಯವಿಲ್ಲವೆಂಬ ಸತ್ಯವನ್ನು ಅರಿತೇ ನಿಮ್ಮಂತಹ ವೀರರ ಸಹಕಾರ ಅಪೇಕ್ಷಿಸಿದೆ.

ಬಾಜಿ–ನಾನೆಂದೂ ಸ್ವಾಮಿ ದ್ರೋಹಿಯಾಗಲಾರೆ.

ಶಿವಾ–ಮೋಸದಿಂದ ಭಾರತದಲ್ಲಿ ರಾಜ್ಯಸ್ಥಾಪಿಸಿ ಕ್ರೂರತೆಯಿಂದ ಆಳುತ್ತಿರುವ ಅತ್ಯಾಚಾರೀ ಮ್ಲೇಂಛರ ಸೇವೆಯೂ ಸ್ವಾಮಿಕಾರ್ಯವೇ? ಭಾರತದ ಭಗಿನಿಯರ ಮಾನ ಕೆಡಿಸುವ ಮ್ಲೇಂಛರ ನೌಕರಿಯೂ ಸ್ವಾಮಿ ಕಾರ್ಯವೇ? ಪವಿತ್ರ ದೇವಾಲಯುಗಳನ್ನೂ ಹಾಳುಗೆಡಹುವ ಆ ನೀಚರ ಚಾಕರಿಯೂ ಸ್ವಾಮಿ ಕಾರ್ಯವೇ? ಛಿ! ನಿಮ್ಮಂತಹ ಯೋಗ್ಯರ ಸ್ವಾಮಿಯಾಗುವ ಯೋಗ್ಯತೆಯಾದರೂ ಇದೆಯೇ ಅವರಲ್ಲಿ?

ಬಾಜಿ–(ತಲೆ ತಗ್ಗಿಸಿ ಯೋಚಿಸಿ) ಹೇಗಾದರೂ ನಮಗೆ ಪಾಳೆಯದ ಅಧಿಕಾರ ಕೊಟ್ಟವರು. ಅವರಿಗೆ ಮೋಸಮಾಡಲು ಮನಸ್ಸೊಪ್ಪದು.

ಶಿವಾ–ಮೋಸ ಮಾಡಬೇಕೆಂದು ನಾನೂ ಹೇಳುತ್ತಿಲ್ಲ ಬಾಜೀರಾಯರೇ. ಅವರ

ಅಧಿಕಾರವನ್ನು ಅವರಿಗೇ ಬಿಟ್ಟುಕೊಟ್ಟು, ಆ ಕೊಳಕು ಪದವಿಯಿಂ
ಹೊರಗೆ ಬನ್ನಿ. ಭಾರತ ಮಾತೆಯ ಸೇವೆಗಾಗಿ, ನಾವು ಒಂದಾ
ಹೋರಾಡುವ. ಆ ಪವಿತ್ರ ಕಾರ್ಯಕ್ಕಾಗಿ ಮಡಿದರೂ ದೊರಕುವ ವೀ
ಸ್ವರ್ಗಕ್ಕಿಂತ ಮಿಗಿಲಾದ ಪದವಿ ಬೇಡಿದೆಯೇ ದೇಶಪಾಂಡೆಯವರೇ?

(ಬಾಜಿ ಯೋಚಿಸುತ್ತಾ, ನಿಧಾನ ತಲೆಯೆತ್ತಿ ಶಿವಾಜಿಯನ್ನು ನೋಡುವನು

ಶಿವಾ-ಬಾಜೀರಾಯರೇ ಬನ್ನಿ.... ಭಾರತ ಮಾತೆ ಅಳುತ್ತಿದ್ದಾಳೆ—ಕಣ್ಣೀರೊರ
ಸಂತೈಸಿರಿ. ಅತ್ಯಾಚಾರಕ್ಕೆ ಹೆದರಿ ಭಗಿನಿಯರು ನಡುಗುತ್ತಿದ್ದಾರೆ—
ರಕ್ಷಿಸಿರಿ. ಮ್ಲೇಂಛರ ಕತ್ತಿಗೆ ಹೆದರಿ ಗೋವುಗಳು "ಅಂಬಾ" ಎಂದ
ಅರಚುತ್ತವೆ—ಕಾಪಾಡಿರಿ. ಪವಿತ್ರ ದೇವಾಲಯಗಳು ಹಾಳು ಬೀ
ತೊಡಗಿವೆ--ಉಳಿಸಿರಿ. ಶಾಂತಿ-ಸಮೃದ್ಧಿಯ ಸ್ವರಾಜ್ಯ ಕಟ್ಟಲ
ಹೋರಾಡುತ್ತಿದ್ದೇನೆ—ನೆರವಾಗಿರಿ. ಬನ್ನಿ.

(ಕೈನೀಡಿದಾಗ ಬಾಜೀರಾಯನು ಮುಂದೆ ಮುಂದೆ ಬಂದು ಅಪ್ಪಿಕೊಳ್ಳುವನು
ಈಸಾಜಿ ತ್ವರಿತದಿಂದ ಸರಪಳಿ ಬಿಚ್ಚುವನು)

ಬಾಜಿ-ಶಿವಾಜಿ ಮಹಾರಾಜರೇ....ಹಿರಿಯರು ನಡೆದ ದಾರಿ ಎಂಬ ಕುರುಡು ನಂಬಿ
ಯಿಂದ ಸುಲ್ತಾನರ ಸೇವೆಯಲ್ಲೇ ಮುಂದುವರಿದು ಭಾರತ ಮಾತೆಗೆ ಅಪಚಾ
ವೆಸಗಿದೆ. ನನ್ನನ್ನು ಸರಿದಾರಿಗೆ ತಂದಿರಿ. ಇಂದಿನಿಂದ ನಾನು ನಿಮ
ಪವಿತ್ರ ಕಾರ್ಯಕ್ಕಾಗಿ ಪ್ರಾಣ ಅರ್ಪಿಸಲು ಸಿದ್ಧನಿರುವ ಸೈನಿಕ, ನನ್ನನ್ನು
ಸ್ವೀಕರಿಸಬೇಕು.

ಶಿವಾಜಿ-ನೀವು ಸೈನಿಕನಲ್ಲ ಬಾಜೀ ಪ್ರಭುಗಳೇ, ಸ್ವರಾಜ್ಯ ಸೈನ್ಯದ ಸೈನ್ಯಾಧಿಪತಿ

ಈಸಾಜಿ-ಮಹಾ ದಂಡನಾಯಕರಿಗೆ ವಂದನೆಗಳು. ತಮ್ಮನ್ನು ಮೋಸದಿಂ
ಬಂಧಿಸಿದ ಅಪರಾಧವನ್ನು ಕ್ಷಮಿಸಬೇಕು.

ಬಾಜಿ-ಯಾವ ಯುದ್ಧದಲ್ಲೂ ಸೋಲನ್ನು ಕಾಣದ ನನ್ನನ್ನು—ಇಲಿಮರಿಯನ್ನು
ಬೋನಿನಲ್ಲಿ ಸಿಕ್ಕಿಸಿದಂತೆ ಬಂಧಿಸಿ ತಂದ ನಿನ್ನ ಯುಕ್ತಿ ಚಾತುರ್ಯಗಳೆದುರ
ಈ ದಂಡನಾಯಕನೂ ತಲೆಬಾಗಬೇಕಾಗಿದೆ ಈಸಾಜೀ. (ಅಪ್ಪಿಕೊಳ್ಳುವರು

ಶಿವಾಜಿ-ಬಾಜೀ ಪ್ರಭುಗಳೇ...."ಮೊಗಲರ ಹಾಗೂ ಸುಲ್ತಾನರ ಮಹಾ ಶಕ್ತಿ
ಯೊಡನೆ ಹೋರಾಡಲು ನನಗೂ ಶಕ್ತಿ ಕೊಡು" ಎಂದು ದಿನಾಲು ಬೇಡ
ತ್ತಿರುವ ದೇವೀ ಭಕ್ತನು ನಾನು.

ಈಸಾಜಿ–ಆ ಭಕ್ತಶ್ರೇಷ್ಟರ ಶಿಷ್ಯನು ನಾನು.

ಶಿವಾಜಿ–ಅಲ್ಲ. ಮಹಾ ಗಂಡಾಂತರಗಳಿಂದ ಪಾರಾಗಲು ಶಕ್ತಿ ಸಾಲದೆ ಹೋದಾಗ ಯುಕ್ತಿಯನ್ನುಪಯೋಗಿಸಿ ಕಾರ್ಯ ಸಾಧಿಸಿದ ಯುಕ್ತಿ ಪ್ರವೀಣನೇ ಈಸಾಜಿ.

ಬಾಜಿ–ನಿಮ್ಮಿಬ್ಬರ ಆಜ್ಞಾಪಾಲಕನು ನಾನು.

ಶಿವಾಜಿ–ಹಾಗಲ್ಲ ಪ್ರಭುಗಳೇ....ನಮ್ಮಲ್ಲಿ ಭಕ್ತಿ-ಯುಕ್ತಿಗಳು ಕೂಡಿದ್ದು ಶಕ್ತಿಯ ಕೊರತೆ ಉಳಿದಿತ್ತು. ಈಗ ನಮಗೊದಗಿದ ಮಹಾಶಕ್ತಿ ನೀವು. ಈ ಭಕ್ತಿ-ಯುಕ್ತಿ-ಶಕ್ತಿಗಳ ಸಂಗಮದಿಂದ ಸ್ವರಾಜ್ಯ ಕಟ್ಟಬೇಕಾಗಿದೆ. ಹಿಡಿಯಿರಿ ಈ ದಂಡನಾಯಕ ಪದವಿಯ ಕತ್ತಿಯನ್ನು.

(ಖಡ್ಗ ಕೈಗೆ ಕೊಡುವನು)

ಬಾಜಿ–ಪರಕೀಯರ ಆಕ್ರಮಣವನ್ನು ಎದುರಿಸಿ, ಅತ್ಯಾಚಾರವನ್ನು ತಡೆದು, ಮತಾಂಧತೆಯನ್ನು ಮುರಿದು, ಸ್ವರಾಜ್ಯ ನಿರ್ಮಾಣಕ್ಕಾಗಿ, ಈ ಶರೀರದ ಕೊನೆಯ ಬಿಂದು ರಕ್ತವನ್ನೂ ಅರ್ಪಿಸುವೆ. (ಒರೆಯಿಂದ ಖಡ್ಗ ಹಿಡಿದು) ಜೈ ಭವಾನಿ.

ಎಲ್ಲರೂ–ಜೈ ಭವಾನಿ....ಜೈ ಭವಾನಿ....ಜೈ ಭವಾನಿ

---

# ಮಧುಮತಿ

## ಚಾರಿತ್ರಿಕ ನಾಟಕ

(ಏಳೆಂಟು ವರ್ಷಗಳ ಹಿಂದಿನ "ಉತ್ಥಾನ" ಮಾಸಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದ ಕಥೆಯ ಸನ್ನಿವೇಶ-ಪಾತ್ರವರ್ಗಗಳನ್ನು ನಾಟಕಕ್ಕೆ ಅಳವಡಿಸುವ ಉದ್ದೇಶದಿಂದಲೇ ಬರೆದಿಟ್ಟುಕೊಂಡಿದ್ದೆನಾದರೂ, ಅದಕ್ಕೆ ಪುಷ್ಟಿದೊರಕುವ ಚರಿತ್ರೆಯ ಆಧಾರ ದೊರಕಿರಲಿಲ್ಲ. ಇತ್ತೀಚೆಗೆ ಕುಂಟತೈಮೂರನ ಕಥೆಯೊಂದರಲ್ಲಿ ಅದೇ ಸನ್ನಿವೇಶಗಳಿಗೆ ಸಹಾಯಕವಾದ ಆಧಾರಗಳು ದೊರಕಿದ ಬಳಿಕ ಪ್ರೌಢ ನಾಟಕ ರಚಿಸಬೇಕೆಂದಿದ್ದ ಮನಸ್ಸನ್ನು ಬದಲಾಯಿಸಿ, ಈ ಕಿರು ನಾಟಕ ರಚಿಸಿದೆ—ಲೇಖಕ)

---

### ಪಾತ್ರವರ್ಗ:

ರಾಮಸಿಂಗ್
ಅಜಿತ್‌ಸಿಂಗ್
ಮಧುಮತಿ
ಮಾಲಿನಿ
ತೈಮೂರ
ಸಮದ್‌ಖಾನ್
ಸಜಿದ್
ಖಾಜಿ
ಶುಕೂರ್
ಜವಾನರು, ಸೈನಿಕರು

### ದೃಶ್ಯಗಳು:

ಅರಮನೆಯ ಕೋಣೆ
ದಾರಿ
ರಣರಂಗ
ಸೆರೆಮನೆ

## 1ನೇ ದೃಶ್ಯ—ಅರಮನೆಯ ಕೋಣೆ

(ರಾಮ ಸಿಂಗನು ಯುದ್ಧದ ಪೋಷಾಕು ಧರಿಸುತ್ತಿರುವನು. ಮಗಳು ಮಧುಮತಿ ಸಹಕರಿಸುತ್ತಿರುವಳು. ಸಖಿ ಮಾಲಿನಿ ದೂರ ನಿಂತಿದ್ದಾಳೆ. ಮಧುಮತಿ ತಂದೆಯ ಹೆಗಲಿಗೆ ಖಡ್ಗ ಸಿಕ್ಕಿಸಿ ಮುಖವನ್ನೇ ನೋಡಿ)

ಮಧುಮತಿ–ಅಪ್ಪಾಜೀ....

ರಾಮಸಿಂಗ್–ಏನಮ್ಮಾ....?

ಮಧು–"ರಜಪೂತ ಕೇಸರಿ"ಯೆಂದು ಹೆಸರು ಪಡೆದ ನೀವು ರಣರಂಗಕ್ಕೆ ಹೊರಟಾಗ ಕಣ್ಣೀರು ಸುರಿಸುವಿರಾ?

ರಾಮ–ಹೌದಮ್ಮಾ.... ಕಣ್ಣೀರು ಬಿಡಿಯಿತು.... ಆದರೆ ಅದು ನನಗಾಗಿ ಅಲ್ಲ...

ಮಧು–ಮತ್ತಾರಿಗಾಗಿ?

ರಾಮ–ಕ್ರೂರ ತೈಮೂರನ ಸೈನ್ಯವನ್ನು ಪುಡಿಗಟ್ಟುತ್ತಾ ರಣರಂಗದಲ್ಲಿ ಮಡಿದು ವೀರ ಸ್ವರ್ಗಪಡೆಯಲು ತುಂಬಾ ಸಂತೋಷವಾಗುತ್ತದೆ.... ಆದರೆ... ಆದರೆ... ಮಧೂ...

ಮಧು–ಆದರೆ.... ಏನಪ್ಪಾಜೀ?

ರಾಮ–(ದುಃಖಿಸಿ) ಅಮ್ಮಾ... ನೀನು.... ನೀನು?

ಮಧು–ನನಗೇನಾಗಿದೆ ಅಪ್ಪಾಜೀ?

ರಾಮ–ತಾಯಿ ಇಲ್ಲದ ತಬ್ಬಲಿ ನಿನ್ನನ್ನು ಬಹಳ ಪ್ರೀತಿಯಿಂದ ಸಾಕಿ ಬೆಳೆಸಿದೆ ಮಧೂ.... ಓರ್ವ ವೀರ ರಾಜಕುಮಾರನಿಗೆ ವಿವಾಹ ಮಾಡಿಕೊಟ್ಟು ನಿನ್ನ ಅಭಿವೃದ್ಧಿಯನ್ನು ಕಣ್ಣಾರೆ ಕಾಣಬೇಕೆಂಬಾಶೆ ಇತ್ತಮ್ಮಾ....ಈಗ....

ಮಧು–ಈಗಲೂ ಏನೂ ತೊಂದರೆಯಾಗಿಲ್ಲಪ್ಪಾಜೀ. ನೀವು ಯುದ್ಧದಲ್ಲಿ ವಿಜಯಿಗಳಾಗಿಯೇ ಬರುತ್ತೀರಿ.

ರಾಮ–ಇಲ್ಲಮ್ಮಾ.... ಇಲ್ಲ. ಕಣ್ಣಿನಲ್ಲಿ ರಕ್ತವಿಲ್ಲದ–ಹೃದಯದಲ್ಲಿ ಕನಿಕರವಿಲ್ಲದ, ಮಂಗೋಲ ಸೈನಿಕರ ಪಡೆ, ನಮ್ಮ ಸಂಖ್ಯೆಗಿಂತ ಹತ್ತರಷ್ಟಿದೆ. ಅವರನ್ನು ಗೆದ್ದು ನಾವು ಹಿಂತಿರುಗುವ ಕಾಲವಿಲ್ಲ ಮಧೂ.... ನಿನ್ನ ಗತಿ ಏನೆಂಬ ಚಿಂತೆಯೇ ನನ್ನ ಶಕ್ತಿ ಕುಂದಿಸಿದೆ.

**ಮಧು**–ನನ್ನ ಬಗ್ಗೆ ಚಿಂತಿಸಬೇಡಿ ಅಪ್ಪಾಜೀ... ನನ್ನ ಮಾನರಕ್ಷಣೆ ಮಾಡಿಕೊಳ್ಳುವ ಶಕ್ತಿ ನನ್ನಲ್ಲಿದೆ. ಒಂದು ವೇಳೆ ನಾವು ಸೋತರೂ, ಹೆಂಗಸರೆಲ್ಲರೂ ಆತ್ಮಹತ್ಯೆ ಮಾಡಿಕೊಂಡು ಪರಲೋಕದಲ್ಲಿ ನಿಮ್ಮನ್ನು ಕೂಡಿಕೊಳ್ಳುತ್ತೇವೆ.

**ರಾಮ**–ಅದೇ.... ಅದೇ ಚಿಂತೆ ನನ್ನನ್ನು ನಡುಗಿಸಿದೆ ಮಧುಮತಿ. ಪುಷ್ಪ ಅರಳಿ ಲೋಕಕ್ಕೇ ಸುವಾಸನೆ–ಸೌಂದರ್ಯ ಬೀರಬಲ್ಲ ಈ ಮೊಗ್ಗು, ಮೊಗ್ಗಾಗಿಯೇ ಕಳಚಿ ಬೀಳುವುದಲ್ಲಾ ಎಂಬುದೇ ನನ್ನ ಚಿಂತೆ ಅಮ್ಮಾ.

**ಮಧು**–ಚಿಂತಿಲ್ಲ ಅಪ್ಪಾಜೀ.... ಮುಂದಿನ ಜನ್ಮದಲ್ಲೂ ನಿಮ್ಮ ಮಗಳೇ ಆಗಿ ಜನಿಸುವಂತೆ ಶ್ರೀ ದೇವಿ ಕೃಪೆ ಮಾಡುತ್ತಾಳೆ. ಆಗ ನಿಮ್ಮ ಮನಸ್ಸಿನ ಆಶೆ ಕೈಗೂಡುತ್ತದೆ. (ಅಜಿತ್ ಓಡಿ ಬರುತ್ತಾನೆ)

**ಅಜಿತ್**–ಅಪ್ಪಾಜೀ... ವೈರಿ ಸೈನ್ಯ ಬಹಳ ಮುಂದೊತ್ತಿ ಬರುತ್ತಿದೆ. ಕಾಣಸಿಕ್ಕಿದ ಸ್ತ್ರೀಯರು–ಮಕ್ಕಳು–ಸಾಧುಸಂತರನ್ನೂ ಕೊಲ್ಲುತ್ತಿದ್ದಾರೆ. ದೇವಾಲಯಗಳನ್ನು ಕೆಡವಿ ಕೊಳ್ಳೆಹೊಡೆಯುತ್ತಿದ್ದಾರೆ.

**ರಾಮ**–ಇದೋ ಸಿದ್ಧನಾಗಿಯೇ ಇದ್ದೇನೆ. ಆ ನೀಚರನ್ನು ಇನ್ನು ಮುಂದೊತ್ತಲು ಬಿಡಲಾರೆ. ನೀನು ಇಲ್ಲೇ ಇರು ಅಜಿತ್.

**ಅಜಿತ್**–ನಾನೂ ರಣರಂಗಕ್ಕೆ ಬರುತ್ತೇನೆ ಅಪ್ಪಾಜೀ. ನಾಲ್ಕಾರು ವೈರಿಗಳನ್ನಾದರೂ ಕೊಂದು ದೇಶ ಸೇವೆ ಮಾಡುವ ಅವಕಾಶ ಕೊಡಿ

**ರಾಮ**–ಮಗೂ ನೀನಿನ್ನೂ ಸಣ್ಣವನಪ್ಪಾ. ನಿನ್ನಿಂದ ರಣರಂಗದಲ್ಲೇನೂ ಸಾಗದು. ನಿನ್ನಂತಹ ಎಳೆಗರುವನ್ನು ರಣರಂಗಕ್ಕೊಯ್ದು ಆ ನೀಚರ ಕತ್ತಿಗೆ ಬಲಿಕೊಡಲಾರೆ

**ಅಜಿತ್**–ಹೆತ್ತ ತಂದೆ ತಾಯಿಯರಿಗೆ ಮಕ್ಕಳು ಸಣ್ಣವರಾಗಿಯೇ ಕಾಣುವುದು ಅಪ್ಪಾಜೀ... ಈಗ ನಾನೂ ಬೆಳೆದಿದ್ದೇನೆ–ಯುದ್ಧ ವಿದ್ಯೆಯಲ್ಲಿ ಪಳಗಿದ್ದೇನೆ.

**ರಾಮ**–ಹಾಗಲ್ಲ ಮಗೂ... ಇಲ್ಲಿ ನಿನ್ನ ಅಕ್ಕನ ರಕ್ಷಣೆಗೂ ನಿನ್ನ ಅಗತ್ಯವಿದೆ. ಇಲ್ಲೇ ಇರು.

**ಅಜಿತ್**–ಅಕ್ಕ ಅರಮನೆಯೊಳಗಿದ್ದಾಳೆ. ಸದ್ಯ ತೊಂದರೆ ಇಲ್ಲ ಅಪ್ಪಾಜೀ... ನೀವು ರಣರಂಗಕ್ಕೆ ಹೋಗುತ್ತೀರಿ, ಅಲ್ಲಿ ನಿಮ್ಮ ಬೆಂಗಾವಲಾಗಿರಲು ಅವಕಾಶ ಕೊಡಿ. ಯಾವ ನೀಚನೂ ನಿಮ್ಮ ಮೇಲೆ ಕೈ ಎತ್ತದಂತೆ ನಾನು ನೋಡಿಕೊಳ್ಳುತ್ತೇನಪ್ಪಾಜೀ...

ರಾಮು-ಅಜಿತ್... (ಅಪ್ಪಿಕೊಳ್ಳುವನು) ಹಠ ಮಾಡಬೇಡ ಮಗೂ.... ರಣರಂಗದಲ್ಲಿ ವೈರಿಗಳನ್ನು ತಡೆಗಟ್ಟಲು ನನ್ನಲ್ಲಿ ಶಕ್ತಿ ಇದೆ. ಆದರೆ ವೈರಿಗಳು ಅರಮನೆ ನುಗ್ಗಿ. ಅಕ್ಕನನ್ನು ಹಿಡಿದುಬಿಟ್ಟಾರು. ಅವಳ ರಕ್ಷಣೆಗೆ ನೀನು ಬೇಡವೇ? ಅವಳೊಬ್ಬಳನ್ನೇ ಬಿಟ್ಟು ಹೋಗುತ್ತೀಯಾ?

ಅಜಿತ್-(ಅಕ್ಕನನ್ನೇ ನೋಡಿ) ಅಕ್ಕಾಜೀ...

(ಧಾವಿಸಿ ಅಪ್ಪಿಕೊಳ್ಳುತ್ತಾನೆ. ಹೊರಗಿನಿಂದ ಯುದ್ಧದ ಗದ್ದಲ ದೂರ ದಿಂದೆಂಬಂತೆ ಕೇಳುತ್ತದೆ. ರಾಮುಸಿಂಗ್ ಆಕಡೆ ಆಲಿಸಿ)

ರಾಮು-ಮಕ್ಕಳೇ ಜಾಗ್ರತೆಯಾಗಿರಿ. ವೈರಿಗಳು ಹತ್ತಿರ ಬಂದಂತಿದೆ. (ಒರೆಯಿಂದ ಖಡ್ಗ ಹಿಡಿದು) ಜೈ ಭವಾನಿ!

ಮಕ್ಕಳು-ಜೈ ಭವಾನಿ.

(ಧಾವಿಸುವನು)

---

## 2ನೇ ದೃಶ್ಯ—ರಣರಂಗ.

(ಒಂದನೇ ದೃಶ್ಯದ ಕೊನೆಯಲ್ಲಿ ಆರಂಭವಾದ ಯುದ್ಧದ ಗಲಾಟೆ ಕೊನೆಗೊಳ್ಳದೆ ಮುಂದುವರಿದು ಮುಂದಿನ ದೃಶ್ಯದ ವ್ಯವಸ್ಥೆ ಮಾಡುವ ವರೇಗೂ ಗದ್ದಲ ಹೆಚ್ಚಾಗುತ್ತಾ ಹೋಗಿ, ದೃಶ್ಯ ತೆರೆದೊಡನೆ ಸೈನಿಕರ ಓಡಾಟ, ನುಗ್ಗಾಟ, ಕೂಗಾಟಗಳೊಡನೆ, ದಂಡನಾಯಕ ಸಮದ್ ಖಾನನೊಂದಿಗೆ ರಾಮುಸಿಂಗ ಹೋರಾಡುತ್ತಾ ಬಂದಾಗ ಹಿಂದಿನಿಂದ ಸೈನಿಕನೊಬ್ಬ ರಾಮುಸಿಂಗನನ್ನು ಇರಿದಾಗ ರಾಮುಸಿಂಗ್ ಮಡಿದು ಬೀಳುತ್ತಾನೆ. ಕರ್ಕಶವಾಗಿ ನಗುತ್ತಾ ಸಮದ್ ಖಾನ್ ಮುಂದುವರಿಯುತ್ತಾನೆ. ಗದ್ದಲ, ಕೂಗಾಟಗಳು ತುಸು ಕಡಿಮೆಯಾಗುತ್ತಾ....ನಿಶ್ಶಬ್ದತೆಯಾಗುತ್ತದೆ)

---

## 3ನೇ ದೃಶ್ಯ—ಅರಮನೆಯ ಕೋಣೆ.

(ಮಧುಮತಿ ಹಾಡುತ್ತಾ ದೇವತಾ ಪ್ರಾರ್ಥನೆಯಲ್ಲಿದ್ದಾಳೆ. ಅಜಿತ ಕೈಮುಗಿ ನಿಂತಿದ್ದಾನೆ. ಮಾಲಿನಿ ಹೊರಗಿನಿಂದ ಅಳುತ್ತಾ ಓಡಿ ಬಂದು)

ಮಾಲಿನಿ-ರಾಜಕುಮಾರೀ... ರಾಜಕುಮಾರೀ... (ಅಳುವಳು)

ಮಧು-(ಗಾಬರಿಯಿಂದ) ಮಾಲಿನೀ ಏನಾಯಿತು?

ಮಾಲಿನಿ-ಮಹಾರಾಜರು ರಣರಂಗದಲ್ಲಿ ಮಡಿದರಕ್ಕಾ...

(ಗೋಳೋ ಎಂದು ಅಳುತ್ತಾ ಮಧುಮತಿ ಅಜಿತನನ್ನು ಅಪ್ಪಿ ಅಳುತ್ತಾ ಹೊರಗಿನಿಂದ ಸೈನಿಕರ ಗಲಾಟೆ ಕೇಳಿ ಇಬ್ಬರೂ ಸೆಟೆದು ನಿಲ್ಲುತ್ತಾ ನಾಲ್ಕಾರು ಸೈನಿಕರು ಧಾವಿಸಿದಾಗ, ಅಜಿತ ಖಡ್ಗ ಹಿಡಿದು ಹೋರಾಡಿದರ ಸೋತು, ಸೈನಿಕರು ಅಜಿತನನ್ನು ಕಟ್ಟುತ್ತಿದ್ದಾಗ ಅಜಿತ ತಪ್ಪಿಸಿ ಓಡುತ್ತಾ ಸೈನಿಕರು ಕೆಲವರು ಬೆನ್ನಟ್ಟುತ್ತಾರೆ. ಉಳಿದವರು ಮಧುಮತಿಯನ್ನೂ ಮಾಲಿನಿಯನ್ನೂ ಕಟ್ಟಿ ಎಳಕೊಂಡು ಹೋಗುತ್ತಾರೆ)

---

## 4ನೇ ದೃಶ್ಯ—ದಾರಿ

[ಮಂಗೋಲ ಸೈನಿಕರು ಅಜಿತನನ್ನು ಹುಡುಕುವಂತೆ ಬರುತ್ತಿದ್ದಾರೆ]

ಶುಕೂರ್-ಛೆ! ಛೆ! ಬಹಳ ಚಲಾಕಿ ಹುಡುಕ.

ಹವಿಾದ್-ಅವನ ಚಲಾಕಿನಲ್ಲಿ ನಮ್ಮ ತಲೆಗೆ ಕಾಲ ಬಂತಲ್ಲಾ. "ರಾಜುಕುಮಾ ನನ್ನು ಹಿಡಿದುಕೊಡದಿದ್ದರೆ; ನಮ್ಮ ರುಂಡವನ್ನೇ ಕಡಿಯಲಾದೀತು ಎಂದು ಸರದಾರರು ಘರ್ಜಿಸಿದ್ದಾರೆ.

ಶುಕೂ-ಬಾ, ಹುಡುಕೋಣ. ನಮ್ಮ ಕಣ್ಣು ತಪ್ಪಿಸಿ ಹೇಗೆ ಬದುಕುತ್ತಾನೋ ನೋಡುವ.

(ಸಮದ್ ಖಾನ್ ಬರುತ್ತಾನೆ. ಸೈನಿಕರು ಸಲಾಂ ಮಾಡುತ್ತಾರೆ.)

ಸಮದ್-ಏ ಬಕ್ ರಾಗಳೇ...ಇಲ್ಲಿ ಪಟ್ಟಾಂಗ ಹೊಡೆಯುತ್ತಿರಾ...ಆ ಪೋರನನ ಹುಡುಕುತ್ತೀರಾ?

ಹಮೀ-ಬಹಳ ಹುಡುಕಿದೆವು ಹುಜೂರ್....ಆದರೆ ಆ ಹುಡುಗ ಸಿಗಲೇ ಇಲ್ಲ.
ಸಮು-ನಿಮ್ಮ ತಲೆ...! ಹಾಗೆ ಅವನು ರಾಜಕುಮಾರನ ವೇಶದಲ್ಲೇ ಇರಲಿಕ್ಕಿಲ್ಲ. ವೇಶ ತಪ್ಪಿಸಿ ತಲೆಮರೆಸಿಕೊಂಡಿದ್ದಾನು_"ಹೇಗಾದರೂ ಮಾಡಿ. ಆ ರಾಜ ವಂಶದ ಪೀಳಿಗೆಯನ್ನೇ ಅಳಿಸಬೇಕು. ಇಲ್ಲವಾದರೆ ಸೇಡು ತೀರಿಸಲು ಯತ್ನಿಸಿಯಾನು"—ಎಂದು ತೈಮೂರ್ ಖಾನರ ಅಪ್ಪಣೆಯಾಗಿದೆ.
ಶುಕೂ-ಈ ದಿನ ಖಂಡಿತಾ ಹುಡುಕುತ್ತೇವೆ ಹುಜೂರ್ (ಹೋಗತೊಡಗಿದಾಗ)
ಸಮು-ಶುಕೂರ್...ನಿಲ್ಲಿ! (ಇಬ್ಬರೂ ತಿರುಗಿ ನಿಂತಾಗ) ಒಂದು ಕೆಲಸ ಮಾಡಿ...
ಶುಕೂ-ಅಪ್ಪಣೆಯಾಗಲಿ ಹುಜೂರ್,
ಸಮು-ಅವನ ಪ್ರಾಯದ, ಈ ರಾಜ್ಯದ ಎಲ್ಲಾ ಹುಡುಗರನ್ನೂ ಕೊಂದುಬಿಡಿ.
ಹಮೀ-(ಕಂಪಿಸಿ) ಹುಜೂರ್....ಎಲ್ಲಾ ಹುಡುಗರನ್ನೂ....?
ಸಮು-ಹೌದು. ಹಾಗೆ ಮಾಡಿದರೆ ಅವನು ಯಾವ ವೇಶದಲ್ಲಿದ್ದರೂ ಬದುಕಿ ಉಳಿವ ಕಾಲವಿಲ್ಲ. ಎಲ್ಲಾ ಮಕ್ಕಳನ್ನೂ ಹಿಡಿದು ಕೊಲ್ಲಿರಿ, ಹೋಗಿ.
ಶುಕೂ-ಅಪ್ಪಣೆ ಹುಜೂರ್.

(ಸೈನಿಕರು ಕತ್ತಿ ಹಿಡಿದು ಒಂದು ಕಡೆಗೂ ಸಮುದ್ ಇನ್ನೊಂದು ಕಡೆಗೂ ಹೋಗುವರು.)

---

## ೫ನೇ ದೃಶ್ಯ—ಸೆರೆಮನೆ

[ಮಧುಮತಿ ಮಾಲಿನಿಯರು ದುಃಖದಿಂದ ಕುಳಿತಿದ್ದಾರೆ. ಕಾವಲುಗಾರನೊಬ್ಬ ಹೊರಗಿನಿಂದ ಬಂದು ಬಂಧಿಗಳನ್ನು ನೋಡಿ ಹೋಗುತ್ತಾನೆ]

ಮಾಲಿನಿ-ರಾಜಕುಮಾರಿ....ಮಾತಾಡಿಯಾದರೂ ಹೊತ್ತು ಕಳೆಯೋಣ. ಸುಮ್ಮ ನಿದ್ದೀರೇಕೆ?
ಮಧು-ಮಾಲಿನಿ....ಮನುಸ್ಸು ಯೋಚನೆ ಮಾಡುತ್ತಿರುವಾಗ ನಾಲಿಗೆ ಮಾತಾಡ ಲಾರದು.

**ಮಾಲಿನಿ**–ಏನು ಯೋಚನೆ?..ತಪ್ಪಿಸುವ ಉಪಾಯವೇನಾದರೂ ಯೋಚಿಸುತ್ತೀರಾ
**ಮಧು**–ಇಲ್ಲ....ತಪ್ಪಿಸಲಾರೆ. ವೈರಿಗಳ ಕೈಯೊಳಗಿದ್ದಲ್ಲಿಂದಲೇ ಸೇಡು ತೀರಿಸು
ಯೋಚನೆ ಮಾಡುತ್ತಿದ್ದೇನೆ. ಸಹಸ್ರಾರು ಸೈನಿಕರನ್ನೂ, ಪ್ರಜೆಗಳನ್ನೂ
ಸ್ತ್ರೀಯರನ್ನೂ, ನನ್ನ ಪಿತಾಜಿಯನ್ನೂ ನಿರ್ದಯವಾಗಿ ಕೊಂದ ಆ ಕ್ರೂ
ಸಮುದ್ ಖಾನನ ರುಂಡ ಉರುಳಿಸುವ ಯೋಚನೆಯಲ್ಲಿದ್ದೇನೆ.
**ಮಾಲಿನಿ**– ಹುಂ,........ಸೆರೆಮನೆಯಲ್ಲಿದ್ದುಕೊಂಡು ಸೈತಾನರಂತಹ ಸೈನಿಕ
ಕಾವಲಿದ್ದು, ನಾವೇನು ಮಾಡಬಲ್ಲೆವು?
**ಮಧು**–ಮಾಲಿನಿ, ನಾನು ರಜಪೂತ ಕುಮಾರಿ. "ರಜಪೂತ ಕೇಸರಿ" ರಾ
ಸಿಂಗರ ಪುತ್ರಿ...ಸೇಡು ತೀರಿಸದಿದ್ದರೆ ನಾನು ಹೆಣ್ಣಲ್ಲ!
**ಮಾಲಿನಿ**–ಹುಂ. ಸಿಂಹದ ಮರಿಯಾದರೂ ಪಂಜರದೊಳಗೆ ಸಿಕ್ಕಿಬಿದ್ದಿದೆಯಲ್ಲಾ.
**ಮಧು**–ಪಂಜರದೊಳಗಿದ್ದರೂ, ಸಿಂಹ ನರಿಯಾಗದು.
**ಮಾಲಿನಿ**–ಇಂದೇ ನಿಮ್ಮನ್ನು, ತೈಮೂರ್ ಖಾನನಿಗೆ ಕಾಣಿಕೆಯಾಗಿ ಒಪ್ಪಿಸುತ
ರಂತೆ. ಆ ನೀಚ ಕಾಮುಕನ ಕೈಗೆ ದೊರೆತರೆ......?
**ಮಧು**–ಏಕೆ ಅಲ್ಲೇ ನಿಲ್ಲಿಸಿದೆ....? ನಾನೇನು ಮಾನಗೇಡಿಯಾಗಿ ಬಾಳುವೆನೆಂದೆ
ದೆಯಾ? ಥೂ! ಅಂತಹ ಸಂದರ್ಭ ಬಂದಾಗ ಆತ್ಮಹತ್ಯೆ ಮಾಡಿಕೊಳ್ಳ
ಕೈಯಲ್ಲಿ ವಜ್ರದುಂಗುರ ಸಿದ್ಧವಿದೆ. ಸೊಂಟದಲ್ಲಿ ಕಿರುಗತ್ತಿಯೂ ಇದೆ.
(ಹೊರಗಿನಿಂದ ಸೈನಿಕ ಪುನಃ ಬಂದಾಗ ಇಬ್ಬರೂ ಸುಮ್ಮನಾಗುತ್ತಾ
ಸೈನಿಕ ನೋಡಿ ಹೋಗುತ್ತಾನೆ.

---

### 6ನೇ ದೃಶ್ಯ—ಅರಮನೆಯ ಕೋಣೆ.

[ಒಂದು ಕಾಲು ಕುಂಟಾದುದರಿಂದ ಒಂದು ಕಂಕುಳಿಗೆ ಮರದ ಕಾಲು ಸಿಕ್ಕಿಸಿಕೊಂ
ಟಕ ಟಕ ಸದ್ದಿನೊಡನೆ ನಡೆಯುತ್ತಾ ತೈಮೂರನು ಪ್ರವೇಶಿಸುತ್ತಾ, ಅರಮನೆ
ಸೌಂದರ್ಯವನ್ನು ನೋಡುತ್ತಿರುತ್ತಾನೆ. ಹಿಂದಿನಿಂದ ಸಮುದ್ ಖಾನನೂ ಸೈನಿಕರ
ನಿಂತಿರುತ್ತಾರೆ]

**ತೈಮೂ**–ವಾಹವ್ಹಾ...ಎಷ್ಟು ಸುಂದರವಾಗಿ ಅರಮನೆ ರಚಿಸಿದ್ದಾರೆ.
ಓಹೋಹೊ...ಶಿಲ್ಪಕಲೆ—ಚಿತ್ರಕಲೆಗಳ ಸಂಗಮವೇ ಮೈವೆತ್ತಂತಿದೆ.

ಸಮು–ಹೌದು ಹುಜೂರ್, ಭಾರತದಲ್ಲಿದ್ದಂತಹ ಶಿಲ್ಪಿಗಳೂ, ಚಿತ್ರಕಾರರೂ ಬೇರೆಲ್ಲಿಯೂ ಇಲ್ಲ.

ತೈಮೂ–ಇವರೆಲ್ಲ....ಅರಮನೆ, ದೇವಸ್ಥಾನಗಳ ರಚನೆಗೆ ಇಷ್ಟು ಹಣ ವ್ಯಯಿಸುವುದನ್ನು ಬಿಟ್ಟು, ಧನ ಸಂಪತ್ತುಗಳನ್ನು ಖಜಾನೆಯಲ್ಲೇ ಶೇಖರಿಸಿಡುತ್ತಿದ್ದರೆ, ನಮಗೆ ಸುಲಭವಾಗಿ ಕೊಳ್ಳೆಹೊಡೆಯಬಹುದಿತ್ತು.

ಸಮು–ಈಗಲೂ ನೂರು ಒಂಟೆಗಳು ಹೊರುವಷ್ಟು ಧನಕನಕ ರತ್ನರಾಶಿಗಳ ಸಂಗ್ರಹ ದೊರಕಿದೆ ಹುಜೂರ್.

ತೈಮೂ–ಥೂ...! ಅದೇನು ಮಹಾ....? ನಮ್ಮ ಹಿರಿಯರಾದ ಛೆಂಗೀಸ್ ಖಾನರು ಭಾರತಕ್ಕೆ ಬಂದು ಐದು ನೂರು ಒಂಟೆಗಳಲ್ಲಿ ಹೇರಿಕೊಂಡು ಧನಕನಕ ರತ್ನರಾಶಿಗಳನ್ನು ತಂದಿದ್ದಾರಂತೆ. ನಾವು ಕೇವಲ ನೂರು ಒಂಟೆಗಳು ಹೊರುವಷ್ಟು ಮಾತ್ರ....

ಸಮು–ಅದು ಇಷ್ಟರೊಳಗಿನ ಗಳಿಕೆ ಹುಜೂರ್. ಇನ್ನೂ ಕೆಲದಿನಗಳಲ್ಲಿ ನಾವೂ ಆ ಮೊತ್ತಕ್ಕೆ ತಲುಪುತ್ತೇವೆ.

ತೈಮೂ–ಸರಿ....ಅದು ಹೌದು...ಈಗ ತಪ್ಪಿಸಿದ ರಾಜಕುಮಾರ ದೊರಕಲಿಲ್ಲವಲ್ಲಾ ಸಮುದ್ ಖಾನ್?

ಸಮು–ಅವನು ದೊರಕದಿದ್ದರೇನಾಯಿತು ಹುಜೂರ್? ಇಡೀ ರಾಜ್ಯದಲ್ಲಿರುವ ಆ ಪ್ರಾಯದ ಎಲ್ಲಾ ಹುಡುಗರನ್ನು ನಮ್ಮ ಸೈನಿಕರು ಕೊಲ್ಲುತ್ತಿದ್ದಾರೆ. ಹಾಗೆಂದಾಗ ಅವನು ಎಲ್ಲಿ ಅವಿತಿದ್ದರೂ ಸಾಯಲೇ ಬೇಕು.

ತೈಮೂ–ಶಹಬ್ಬಾಸ್, ಸಮುದ್ ಖಾನ್....ದಂಡನಾಯಕನೆಂದರೆ ನೀನೇ ಸರಿ. ನಿನ್ನ ಆ ಕೆಲಸದಿಂದ ಇನ್ನೊಂದು ಮಹಾ ಉಪಕಾರವಾಗುತ್ತಿದೆ.

ಸಮು–ಅದಾವುದು ಹುಜೂರ್?

ತೈಮೂ–ಮುಂದಿನ ಪೀಳಿಗೆಯಾದ ಹುಡುಗರನ್ನೆಲ್ಲ ಈ ಸಲವೇ ನಾಶಮಾಡಿ ಹೋದರೆ, ನಾವು ನಾಲ್ಕು ವರ್ಷ ಕಳೆದು ಇನ್ನೊಮ್ಮೆ ಭಾರತಕ್ಕೆ ಬಂದಾಗ ಗಂಡಸರೇ ಇಲ್ಲದೆ. ಕೇವಲ ಹೆಂಗಸರೇ ಇದ್ದು. ನಮಗೆ ಹೋರಾಟವಿಲ್ಲದೇ ಕೊಳ್ಳೆಹೊಡೆಯಬಹುದಾಗುತ್ತದೆ.

ಸಮು–ಸರಿಯಾದ ಯೋಜನೆ ಹುಜೂರ್....ಹೌದು.

(ಅಜಿತ್ ಸಿಂಗ್ ಧಾವಿಸಿ ಬರುತ್ತಾನೆ)

ಅಜಿತ್–ತೈಮೂರ್ ಖಾನ್....ನನ್ನನ್ನು ಕೊಲ್ಲಿರಿ....ನನಗಾಗಿ ಸಾವಿರಾರು ಮಕ್ಕಳನ್ನು ಕೊಲ್ಲಬೇಡಿರಿ. ನನ್ನೊಬ್ಬನನ್ನೇ ಕೊಲ್ಲಿರಿ. ನಾನಾಗಿ ಬಂದಿದ್ದೇನೆ.

ಸಮ–ಹುಜೂರ್....ಈತನೇ ಅಜಿತ್ ಸಿಂಗ್. ರಾಮಸಿಂಗನ ಏಕಮಾತ್ರ ಪುತ್ರ.

ತೈಮೂ–ಶಾಬ್ಬಾಸ್...ಅಲ್ಲಾನ ಕೃಪೆಯಿಂದ ನಮ್ಮ ಕೆಲಸಗಳು ಸಲೀಸಾಗಿ ಸಾಗುತ್ತಿವೆ...ಸಮದ್ ಖಾನ್. ಈತನನ್ನು ಕೊಂದು ಬಿಡು.

ಸಮ–ಹುಜೂರ್....ನಾಳೆಯ ವರೆಗೆ ಈತನನ್ನು ಬಂಧನದಲ್ಲಿರಿಸುವ. ಇವನಿಂದ ನಮಗೆ ಬೇರೆ ಕೆಲಸವಾಗಲಿಕ್ಕಿದೆ.

ತೈಮೂ–ಸರಿ. ಸೈನಿಕರೇ ಇವನನ್ನು ಬಂಧನದಲ್ಲಿಟ್ಟು ಕಾವಲಿಡಿ. ಜಾಗ್ರತೆ!

(ಸೈನಿಕರು ಅಜಿತನನ್ನು ಹಿಡಿದೆಳೆದೊಯ್ಯುತ್ತಾರೆ)

ತೈಮೂ–ಅವನಿಂದೇನು ಕೆಲಸ ನಮಗೆ ಸಮದ್ ಖಾನ್?

ಸಮ–ಹುಜೂರ್, ಇವನ ಅಕ್ಕ, ಲೋಕೈಕ ಸುಂದರಿ. ಅಂತಹ ಸುಂದರಿಯನ್ನು ನಾನೆಲ್ಲಿಯೂ ಈ ವರೇಗೆ ಕಂಡಿಲ್ಲ. ಅವಳನ್ನು ಬಂಧಿಸಿ, ಸೆರೆಯಲ್ಲಿಟ್ಟದ್ದೇನೆ. ಈ ದಿನ ತಮಗೆ ಕಾಣಿಕೆಯಾಗಿ ಅರ್ಪಿಸುತ್ತೇನೆ.

ತೈಮೂ–ಶಾಬ್ಬಾಸ್...ಒಳ್ಳೆಯ ಕೆಲಸಮಾಡಿದೆ. ಕಳಿಸಿಕೊಡು ಆ ಸುಂದರಿಯನ್ನು.

ಸಮ–ಹುಜೂರ್, ಹಿಂದೂ ಸ್ತ್ರೀಯರು, ಹಾಗೆಲ್ಲ ಸುಲಭದಲ್ಲಿ ಮಾನಕೆಡಲು ಸಿದ್ಧರಾಗುವುದಿಲ್ಲ. ಸಾಯಲು ಬೇಕಾದರೆ ಥಕ್ಕ ತಯಾರಾಗುತ್ತಾರೆ. ತಮ್ಮ ವಶವಾಗಲು ಒಂದು ವೇಳೆ ಆ ಕುಮಾರಿ ಒಪ್ಪದಿದ್ದರೆ, ಅವಳೆದುರಲ್ಲೇ ಆ ರಾಜಕುಮಾರನ ತಲೆ ಕಡಿಯುವೆವೆಂದು ಹೆದರಿಸಿದರೆ, ಸೋದರ ಪ್ರೀತಿ–ಯಿಂದ–ಸೋದರನ ಬದುಕಿಗಾಗಿ ಆವಳು ತಮಗೆ ವಶಳಾಗುತ್ತಾಳೆ.

ತೈಮೂ–ಭಲೆ! ಭಲೆ! ನೀನು ದಂಡನಾಯಕನು ಮಾತ್ರವಲ್ಲ. ಪ್ರಧಾನ ಮಂತ್ರಿಯಾಗಲೂ ಯೋಗ್ಯತೆ ಉಳ್ಳವನು ಸಮದ್ ಖಾನ್. ರಾಜಧಾನಿಗೆ ತಲುಪಿದೊಡನೆ ನಿನಗೆ ಯೋಗ್ಯ ಬಹುಮಾನ, ಪದವಿ, ಗೌರವ, ಸತ್ಕಾರಗಳನ್ನು ನೀಡಲಾಗುತ್ತದೆ.

ಸಮ–ತಮ್ಮ ಮೆಚ್ಚುಗೆಯೇ ನನ್ನ ತೃಪ್ತಿ ಹುಜೂರ್.

ತೈಮೂ–ನಮ್ಮ ರಾಜಧಾನಿಯಲ್ಲಿ ನವೀನವಾಗಿ ನಿರ್ಮಿಸಲಾಗುತ್ತಿರುವ ಮಸೀದಿಯನ್ನು ತೆರೆಯುವ ಶುಭದಿನದಂದು ನಿನ್ನನ್ನು ಸಾರ್ವಜನಿಕವಾಗಿ ಗೌರವಿಸಲಾಗುತ್ತದೆ.

**ಸಮು**–ತಮ್ಮ ಸೇವೆಗಾಗಿ ಪ್ರಾಣವನ್ನೇ ಅರ್ಪಿಸುವೆ ಹುಜೂರ್.

**ತೈಮೂ**–ಪ್ರಾಣದ ಅಗತ್ಯವಿಲ್ಲ. ನಿನ್ನ ಸಾಮರ್ಥ್ಯದ ಅಗತ್ಯವಿದೆ. ಸಮದ್ ಖಾನ್, ಈಗ ಸಂಗ್ರಹಿಸಿರುವ ಧನಕನಕಗಳನ್ನು ಒಂಟೆಗಳಲ್ಲಿ ಹೊರಿಸಿ, ರಾಜಧಾನಿಗೆ ಕಳುಹಿಸು. ಅಲ್ಲಿ ಮಸೀದಿ ನಿರ್ಮಾಣದ ಶಿಲ್ಪಿ ದಾವೂದನ ಕೈಚಳಕಕ್ಕೆ ಸಲಕರಣೆ ಒದಗಿಸಲು ಬೇಗಮಳು ನಮ್ಮ ಗಳಿಕೆಯನ್ನು ಕಾದಿರಬಹುದು.

**ಸಮು**–ಅಪ್ಪಣೆ ಹುಜೂರ್ ವ್ಯವಸ್ಥೆ ಮಾಡುತ್ತೇನೆ.

(ತೈಮೂರನು ಹೋಗಿ ಆಸನದಲ್ಲಿ ಕುಳಿತು)

**ತೈಮೂ**–ಹಾಗಾದರೆ ಇನ್ನು ರಾಜಕುಮಾರಿಯನ್ನು ಈಗಲೇ ಕಳುಹಿಸಿಕೊಡು.

**ಸಮು**–ಕಳುಹಿಸುತ್ತೇನೆ ಹುಜೂರ್, ತಾವು ಆ ರೂಪರಾಶಿಯೊಡನೆ ವಿಶ್ರಾಂತಿ ಪಡೆಯಿರಿ. ನಾನು ದಂಡಯಾತ್ರೆ ಮುಂದುವರಿಸಿ, ಧನಕನಕಗಳ ರಾಶಿಯನ್ನೇ ತಂದೊಪ್ಪಿಸುತ್ತೇನೆ.

**ತೈಮೂ**–ಶಹಬ್ಬಾಸ್! ಸಮದ್ ಖಾನ್, ನಿನ್ನಂತಹ ಸ್ವಾಮಿನಿಷ್ಠ ದಂಡನಾಯಕನಿದ್ದುದರಿಂದಲೇ ನಾನು ಎಲ್ಲಾ ದಂಡಯಾತ್ರೆಗಳಲ್ಲಿ ಜಯ ಗಳಿಸಿದೆ....ನನಗೆ ಎರಡು ದಿನ ವಿಶ್ರಾಂತಿಗೆ ಅವಕಾಶ ಕೊಡುವಿಯಾದರೆ ಅದು ನಿನ್ನ ದೊಡ್ಡ ಕೆಲಸ ಹೋಗು, ರಾಜಕುಮಾರಿಯನ್ನು ಕಳುಹಿಸು.

(ಸಮದ್ ಖಾನ್ ವಂದಿಸಿ ಹೋಗುತ್ತಾನೆ. ಒಂದೆರಡು ಜವಾನರು ಉಳಿಯುತ್ತಾರೆ. ತೈಮೂರನು ಎದ್ದು ಪುನಃ ಅರಮನೆಯ ಸೌಂದರ್ಯ ನೋಡುತ್ತಿದ್ದಾಗ, ಅವಗುಂಠನವತಿಯರಾದ ಮಧುಮತಿಯನ್ನೂ, ಮಾಲಿನಿಯನ್ನೂ ಸಮದ್ ಖಾನ್ ಕರೆತಂದು ನಿಲ್ಲಿಸಿ, ವಂದಿಸಿ ಹೋಗುತ್ತಾನೆ. ತೈಮೂರ್ ಅವರನ್ನು ನೋಡುತ್ತಾ ನಿಂತಿದ್ದು...ಸೈನಿಕರತ್ತ ತಿರುಗಿ)

**ತೈಮೂ**–ನೀವು ಹೊರಗೆ ಕಾವಲಾಗಿ ನಿಲ್ಲಿರಿ. ಒಬ್ಬ ಹೋಗಿ ಖಾಜಿಯವರನ್ನು ಬರಹೇಳು. (ಜವಾನರು ವಂದಿಸಿ ಹೋಗುತ್ತಾರೆ. ತೈಮೂರ ಮಧುಮತಿಯ ಹತ್ತಿರ ಬಂದು ಮುಖಪರದೆಯನ್ನು ಸರಿಸಿ ನೋಡಿ, ಆಶ್ಚರ್ಯಗೊಳ್ಳುತ್ತಾನೆ)

**ತೈಮೂ**– ಓಹ್! ಎಂತಹಾ ರೂಪರಾಶಿ...? ರಾಜಕುಮಾರೀ ನಿನ್ನ ಹೆಸರು ಕೇಳಬಹುದೇ?

**ಮಧು**–ಮಧುಮತಿ.

ತೈಮೂ–ಭೇಶ್, ಭೇಶ್, ಮಧುವಿಗಿಂತಲೂ ಸಿಹಿಯಾದ ಹೆಸರು. (ಒಂದೆರಡು ಹೆಜ್ಜೆ ಅತ್ತಿತ್ತ ನಡೆದು) ರಾಜಕುಮಾರಿ ನಿನ್ನ ಅದೃಷ್ಟ ಖುಲಾಯಿಸಿದೆ. ಸಮಗ್ರ ಮಂಗೋಲದ ಚಕ್ರವರ್ತಿಯಾಗಿದ್ದು, ಭಾರತದಲ್ಲೂ ಹಲವು ರಾಜ್ಯ ಪಡೆದಿದ್ದೇನೆ. ಭೂಮಂಡಲದಲ್ಲೇ ಯಾರಲ್ಲೂ ಇಲ್ಲದಷ್ಟು ಧನ-ಕನಕ-ವಜ್ರ ವೈಡೂರ್ಯಗಳನ್ನು ಸಂಗ್ರಹಿಸಿದ್ದೇನೆ. ಈಗ ನನ್ನ ಬೇಗಮ್ಳಾಗುವ ಸುಯೋಗ ನಿನಗೊದಗಿದೆ.

ಮಧು–ಹುಜೂರ್! ತಮ್ಮ ಕೀರ್ತಿಯನ್ನು ಕೇಳಿಯೇ ನಾನು ತಮಗೆ ಮಾರು ಹೋಗಿದ್ದೆ.

ತೈಮೂ–(ಆತುರದಿಂದ) ನಿಜವಾಗಿಯೂ?

ಮಧು–ಸತ್ಯ ಹುಜೂರ್! ಭಾರತಕ್ಕೆ ತಾವು ಬಂದಾಗಲಂತೂ, ನಮ್ಮ ರಾಜ್ಯಕ್ಕೆ ಬರುವಿರಿ–ನನ್ನನ್ನು ಕಾಣುವಿರಿ–ನನ್ನ ರೂಪಕ್ಕೆ ಮೆಚ್ಚುವಿರಿ–ಆಗ ನಾನು ತಮ್ಮ ರಾಣಿಯಾಗಬಹುದು, ಎಂದು ಕಣಸು ಕಾಣುತ್ತಿದ್ದೆ.

ತೈಮೂ–ಭಲೆ! ಭಲೆ!...ತುಂಬಾ ಬುದ್ಧಿವಂತೆ ನೀನು. ಇಂದು ನಿನ್ನ ಕನಸು ನನಸಾಗುತ್ತದಲ್ಲಾ ಮಧುಮತೀ....

ಮಧು–ಇಲ್ಲ ಹುಜೂರ್....ಈಗ ಕನಸು ಒಡೆದು ಹೋಯಿತು. ಮನಸ್ಸಿನ ಗಾಳಿ ಗೋಪುರ ಕಳಚಿ ಬಿತ್ತು.

ತೈಮೂ–ಹಾಂ!... ಅದೇನು ಹಾಗೆ?

ಮಧು–ತಮ್ಮ ಬೇಗಮ್ಳಾಗಲು ನಾನೀಗ ಅಯೋಗ್ಯಳಾಗಿದ್ದೇನೆ.

ತೈಮೂ–ಹಾಂ....ಏನಾಗಿದೆ?

ಮಧು–(ದುಃಖಿಸುತ್ತ) ನನಗೆ ಹೇಳಲು ನಾಚಿಕೆಯಾಗುತ್ತದೆ. ಮಾಲಿನಿ, ಹೇಳೇ ನನ್ನ ದುರವಸ್ಥೆಯನ್ನು ತಿಳಿಸು.

ಮಾಲಿನಿ–ಹುಜೂರ್....ನಾನು ರಾಜಕುಮಾರಿಯ ಸಖಿ. ತಮ್ಮನ್ನೇ ಮದುವೆಯಾಗಬೇಕೆಂದು ರಾಜಕುಮಾರಿ ಹಠಹಿಡಿದು ಕಾದಿದ್ದಳು. ನಮ್ಮನ್ನು ಸೆರೆ ಹಿಡಿದಾಗಲಂತೂ, ಅದೇ ದಿನ ತಮ್ಮೆದುರಿಗೆ ನಿಲ್ಲಿಸುತ್ತಾರೆ—ತಮ್ಮನ್ನು ನೋಡಬಹುದು–ವರಿಸಬಹುದು–ಸುಖಿಸಬಹುದೂ ಎಂದು ಆತುರದಲ್ಲಿದ್ದರು. ಆದರೆ....ಆದರೆ....(ಅಳುವಳು)

ತೈಮೂ–ಛಿ! ಛಿ! ಅಳುವಂತಹ ಕಷ್ಟವೇನಾಯಿತು? ಹೇಳು ಬೇಗ ಹೇಳು.

ಮಾಲಿನಿ–ಹುಜೂರ್, ಚಕ್ರವರ್ತಿಯ ಬೇಗಮುಳಾಗಬೇಕಾಗಿದ್ದ ರಾಜಕುಮಾರಿಯನ್ನು ದಂಡನಾಯಕರು ಅವರ ಢೇರೆಯಲ್ಲೇ ಎರಡು ದಿನ ಉಳಿಸಿಕೊಂಡು ಬಲಾತ್ಕಾರದಿಂದ ಮಾನಗೆಡಿಸಿದರು. ಅವರ ರೂಪದಾಶಿಯನ್ನು ಹೀರಿದರು, ಹಿಸುಕಿ, ಸಸುಕಿ, ಸುಜ್ಜುಗುಜ್ಜಾಗಿ ಬಾಡಿದ ಅಪವಿತ್ರ ಪುಷ್ಪವನ್ನು ನಿಮಗೆ ಕಾಣಿಕೆಯಾಗಿ ಒಪ್ಪಿಸಿದ್ದಾರೆ.

ತೈಮೂ–(ಕೋಪದಿಂದ) ...ನಿಜವೇ ಇದು? ನಿನ್ನ ಮಾತು ಸತ್ಯವೇ?

ಮಾಲಿನಿ–ಸತ್ಯ ಹುಜೂರ್.

ಸುಭು–ಹೌದು ಹುಜೂರ್, ಕುಮಾರಿಯೇ ಆಗಿದ್ದು ತಮ್ಮ ಸೇವೆಗೆ ತಲಪಬೇಕೆಂದು ಬಹಳ ಆಶೆಯಿಂದಿದ್ದೆ. ಈಗ ಆ ನೀಚನ ಸೇವೆಯಲ್ಲಿ ನಾಲ್ಕು ದಿನವಿದ್ದು ಅಪವಿತ್ರವಾದ ಈ ದೇಹವನ್ನು ನಿಮಗೊಪ್ಪಿಸಲು ಹೇಸಿಗೆಯಾಗುತ್ತದೆ.

ತೈಮೂ–(ಅತೀ ಕೋಪದಿಂದ) ಸಮುದ್ ಖಾನ್! (ತುಸು ಆಲಿಸಿ) ಇಲ್ಲ, ಹೋಗಿಬಿಟ್ಟ. ಸಜೀದ್! (ಸಜೀದ್ ಬಂದು ವಂದಿಸುತ್ತಾನೆ) ಸಮುದ್ ಖಾನನನ್ನು ಬರಹೇಳು...(ಸಜೀದ್ ಹೋಗುವನು. ತೈಮೂರ್ ಕೋಪದಿಂದ ಅತ್ತಿತ್ತ ಟಕ ಟಕ ಶಬ್ದದೊಡನೆ ನಡೆಯುತ್ತಾ)

ತೈಮೂ–ಛಿ! ಅಂತಹ ಸ್ವಾಮಿದ್ರೋಹ ಮಾಡಿದನೇ ಆ ನೀಚ?........ಅವನು ತಿಂದುಳಿದ ಎಂಜಲನ್ನು ನನಗೊಪ್ಪಿಸಿದನೇ ಆ ಹರಾಂ? ಬರಲಿ...ಬರಲಿ...

(ಸಮುದ್ ಖಾನ್ ಧಾವಿಸಿ ಬರುತ್ತಾನೆ)

ಸಮು–ಕರೆದಿರಾ ಹುಜೂರ್?

ತೈಮೂ–ಹೌದು ಕರೆದೆ....(ಸಮುದ್ ಖಾನನನ್ನೇ ನೋಡುತ್ತಾ ಹತ್ತಿರ ಹತ್ತಿರ ಬಂದು ಸೊಂಟದಿಂದ ಕಿರುಗತ್ತಿ ಎಳೆದು ರಪ್ಪನೆ ತಿವಿದು ಬಿಡುತ್ತಾನೆ. ಸಮುದ್ ನರಳುತ್ತಾ ಸಾಯುತ್ತಾನೆ)

ತೈಮೂ–ಸಜೀದ್...(ಸಜೀದ್ ಓಡಿಬರುತ್ತಾನೆ)

ತೈಮೂ–ಅತ್ತ ಎಳೆದೊಯ್ಯಿರಿ ಈ ನೀಚನ ಶವವನ್ನು.

(ಸೈನಿಕರು ಎಳೆದುಕೊಂಡು ಹೋಗುತ್ತಾರೆ)

ತೈಮೂ–ರಾಜಕುಮಾರೀ ನೋಡಿದೆಯಾ ನನ್ನ ನ್ಯಾಯನಿಷ್ಠುರತೆಯನ್ನು? ಸ್ವಾಮಿದ್ರೋಹಿಗೆ ತಕ್ಕ ಶಿಕ್ಷೆ ಕೂಡಲೇ ವಿಧಿಸಿದೆ. ನಿನ್ನ ಶೀಲಗೆಡಿಸಿದವನ ಪ್ರಾಣವನ್ನೇ ತೆಗೆದೆ. ನಿನ್ನ ಪ್ರೀತಿಗಾಗಿ—ನಿನ್ನ ತೃಪ್ತಿಗಾಗಿ, ನನ್ನ ದಂಡನಾಯಕನನ್ನೇ ಮುಗಿಸಿದೆ.

**ಮಧು**—ಹುಜೂರ್, ಆ ನೀಚನನ್ನು ನಾನೇ ಕೈಯ್ಯಾರೆ ಕೊಲ್ಲಬೇಕೆಂದಿದ್ದೆ. ಈಗ ನೀವೇ ಮುಂದರಿಸಿದಿರಿ.

**ತೈಮೂ**-ಖಾಜಿಗಳು ಬಂದೊಡನೆ ಅಲ್ಲಾನ ನಾಮಸ್ಮರಣೆಯಿಂದ ನಿನ್ನನ್ನು ಪವಿತ್ರ ಗೊಳಿಸಿದ ಬಳಿಕ ನಾನು ನಿಖಾಹ ಮಾಡಿಕೊಳ್ಳುತ್ತೇನೆ.

**ಮಧು**-ಹುಜೂರ್, ನನ್ನದೊಂದು ಸಣ್ಣ ಅರಿಕೆ.

**ತೈಮೂ**-ಹೇಳು ಮಧೂ...ಹೇಳು ಈಗ ನಿನಗಾಗಿ ನಾನೇನನ್ನೂ ಮಾಡಲು ಸಿದ್ಧನಿದ್ದೇನೆ.

**ಮಧು**-ನನ್ನ ಏಕಮಾತ್ರ ಸೋದರ, ನಿಮ್ಮ ಸೈನಿಕರಿಗೆ ಹೆದರಿ ಎಲ್ಲೋ ಅಡಗಿರ ಬೇಕು. ಅವನಿಗಾಗಿ ನಾಡಿನ ಮಕ್ಕಳೆಲ್ಲರನ್ನೂ ಸೈನಿಕರು ಕೊಲ್ಲು ತ್ತಿದ್ದಾರೆ. ಅದನ್ನು ನಿಲ್ಲಿಸಲು ಆಜ್ಞೆ ಮಾಡಿರಿ. ನನ್ನ ಸೋದರನನ್ನು ಹುಡುಕಿಸಿ ನನ್ನ ಬಳಿಗೆ ತರಿಸಬೇಕೆಂದೂ...

**ತೈಮೂ**-ಹ್ಹ ಹ್ಹ ಹ್ಹ ಅಷ್ಟೇನಾ ನಿನ್ನ ಅರಿಕೆ? ನಿನ್ನ ಸೋದರ ನಮ್ಮ ವಶದಲ್ಲೇ ಇದ್ದಾನೆ...ಸಜೀದ್...

(ಸಜೀದ್ ಓಡಿ ಬರುತ್ತಾನೆ)

**ತೈಮೂ**-ರಾಜಕುಮಾರನನ್ನು ಇತ್ತ ಕರೆದು ತಾ.

(ಸಜೀದ್ ಹೋದಾಗ ತೈಮೂರ ರಾಜಕುಮಾರಿಯನ್ನೇ ನೋಡುತ್ತಾ.... ಹತ್ತಿರ ಹತ್ತಿರ ಹೋಗಿ)

**ತೈಮೂ**-ಮಧು...ನೀನು ಎಷ್ಟು ರೂಪವತಿಯಾಗಿದ್ದೀ...ನನಗಾಗಿಯೇ ಅಲ್ಲಾನು ನಿನ್ನನ್ನು ಸೃಷ್ಟಿಮಾಡಿರಬೇಕು...(ಕೈ ಹಿಡಿಯ ಹೋದಾಗ ಮಧು ಹಿಂದೆ ಸರಿದು)

**ಮಧು**-ಸ್ವಲ್ಪ ತಡೆಯಿರಿ ಹುಜೂರ್. ಖಾಜಿಯವರು ಬಂದು ನನ್ನನ್ನು ಪವಿತ್ರ ಗೊಳಿಸಿದ ಮೇಲೆ....

**ತೈಮೂ**-ಹೌದು....ಹೌದು...ನಿನ್ನ ಮಾತು ಸರಿ....

(ಸಜಿದ್ ಅಜಿತನನ್ನು ಕರೆದುತಂದು ನಿಲ್ಲಿಸುವನು)

**ಅಜಿತ್**-"ಅಕ್ಕಾ" (ಧಾವಿಸಿ ಅಪ್ಪಿಕೊಳ್ಳುವನು) ಅಕ್ಕಾ......ಸೆರೆಮನೆಯಲ್ಲಿ ನಿನ್ನನ್ನು ಹಿಂಸಿಸಿದರೇ....?

ಮಧು–ಇಲ್ಲ ಅಜಿತ್, ನಾನು ಸುಖವಾಗಿದ್ದೇನೆ.

ತೈಮೂರ–ಹಹ್ಹ ಹ್ಹ....ರಾಜಕುಮಾರಾ ನಿನ್ನ ಅಕ್ಕ ಮಂಗೋಲ ಚಕ್ರವರ್ತಿ–ರಣದುರಂಧರ–ಜಗತ್ತಿನ ಅತೀ ಶ್ರೀಮಂತ, ತೈಮೂರಖಾನನ ಬೇಗಮ ಳಾಗುತ್ತಾಳೆ. ಇನ್ನು ಅವಳ ಸುಖಕ್ಕೇನು ಕಡಿಮೆ?

ಅಜಿತ್–(ಕೋಪದಿಂದ) ಅಕ್ಕಾ....! ಹೌದಾ, ನೀನು ಒಪ್ಪಿದೆಯಾ? ಈ ನೀಚ–ಕ್ರೂರಿ–ಕೊಲೆಗಡುಕನನ್ನು ಮದುವೆಯಾಗಲು ಒಪ್ಪಿದೆಯಾ?

ಮಧು–ಇಲ್ಲ ಅಜಿತ್....ನಿನ್ನಕ್ಕ ಅಂತಹ ನೀಚಳೆಂದೂ ಆಗಲಾರಳು. ಇವನಂತಹ, ಕೊಲೆಗಡುಕ ಮ್ಲೇಂಛನನ್ನು ನಮ್ಮೂರಿನ ನಾಯಿ ಕೂಡಾ ತಿರಸ್ಕರಿಸೀತು. ಅವನು ಜೊಗಳುತ್ತಾನೆಂದು ನೀನು ನಂಬಿದೆಯಾ?

ತೈಮೂರ–(ಆಶ್ಚರ್ಯ–ಕೋಪದಿಂದ) ಮಧುಮತೀ....ಏನಂದೇ?

ಮಧು–ಅದನ್ನೇ ಹೇಳಿದೆ. ನಮ್ಮ ರಾಜ್ಯದ ಪ್ರಜೆಗಳನ್ನು ಕೊಂದು, ಸ್ತ್ರೀಯರನ್ನು ಅಪಹರಿಸಿ, ದೇವಾಲಯಗಳನ್ನು ಕೆಡವಿ, ರಾಜ್ಯದ ಸಂಪತ್ತೆಲ್ಲವನ್ನು ಕೊಳ್ಳೆಹೊಡೆದ ಆ ನೀಚ ಸಮದ್ ಖಾನನ್ನು ಕೊಲ್ಲಿಸಲಿಕ್ಕಾಗಿ ನಾನಂತಹ ಕೃತಕ ಮಾತು ಆಡಿದೆ. ನನ್ನ ಪಿತನನ್ನು ಕೊಂದ ನಿನ್ನ ದಂಡನಾಯಕನ ಸೇಡು ತೀರಿಸಲಿಕ್ಕಾಗಿ, ನಿನ್ನಲ್ಲಿ ಪ್ರೇಮ ತೋರಿಸಿ, ಆ ನೀಚನ ಮೇಲೆ ಸುಳ್ಳು ಆರೋಪ ಹೊರಿಸಿದೆ.

ತೈಮೂರ–ಯಾ ಸುಭಾನಲ್ಲಾ!.... ಎಂತಹ ಪ್ರಮಾದವಾಯಿತು? ಎಷ್ಟು ಅವಸರ ಮಾಡಿದೆ? ಅದೆಂತಹ ಸ್ವಾಮಿನಿಷ್ಠ ವೀರನನ್ನು ಕೈಯಾರೆ ಕೊಂದುಬಿಟ್ಟೆ. ಅಲ್ಲಾ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವೇನು?

ಮಧು–ನೀಚಾ! ನೀನು ಗೈದ ಪಾಪಕ್ಕೆ ಏಳೇಳು ಜನ್ಮದಲ್ಲೂ ಪ್ರಾಯಶ್ಚಿತ್ತ ದೊರೆಯದು. ಯಾವ ಅಲ್ಲಾನೂ ನಿನ್ನನ್ನು ಕ್ಷಮಿಸಲಾರ.

ತೈಮೂರ–ದುಷ್ಟೆ....ಮುಚ್ಚು ಬಾಯಿ. ನಿನ್ನ ಸ್ವರ ಕೇಳಿದರೆ ಹೃದಯವೇ ಉರಿದಂತಾಗುತ್ತದೆ. ನಿನ್ನನ್ನು....

(ಮುಂದೆ ಮುಂದೆ ಹೋಗುತ್ತಿದ್ದಾಗ)

ಮಧು–ಕೊಲ್ಲು....ಸಾಯಲು ಸಿದ್ಧಳಿದ್ದೇನೆ. ಸಾಯುವ ಮೊದಲು ನಮ್ಮ ರಾಜ್ಯದ ಸಹಸ್ರಾರು ಪ್ರಜೆಗಳ ಕೊಲೆಗೆ ಕಾರಣನಾದ ಸಮದ್ ಖಾನನನ್ನು ಕೊಲ್ಲಿಸಿ ಮನತೃಪ್ತಿ ಆಗಿದೆ. ಇನ್ನು ನಗುನಗುತ್ತಾ ಸಾಯುವೆ. ಆದರೆ

ಜೀವಂತಳಾಗಿರುವ ವರೇಗೆ ನನ್ನ ಶರೀರ ಸ್ಪರ್ಷ ಮಾಡಲು ಬಿಡಲಾರೆ....
ಕೊಲ್ಲು ನಿನ್ನ ಪಾಪದ ಹೊರೆ ಭರ್ತಿಮಾಡು.

ತೈಮೂರ-ನಿನ್ನನ್ನು ಒಂದೇ ಪೆಟ್ಟಿನಿಂದ ಕೊಲ್ಲಲಾರೆ. ಅಂಗಾಂಗಗಳನ್ನು
ಕೊಚ್ಚಿ ಕೊಚ್ಚಿ, ಗಾಯಕ್ಕೆ ಉಪ್ಪು ಸುರಿಸಿ ಒದ್ದಾಡಿಸಿ ಕೊಲ್ಲುವೆ...
(ಮುಂದೆ ಹೋದಾಗ ಅಜಿತ್ ತಡೆಯ ಬಂದಾಗ ಸಜೀದ್ ಅಜಿತನನ್ನು
ಹಿಡಕೊಳ್ಳುವನು. ತೈಮೂರ ಹತ್ತಿರ ಹೋಗಿ ಕತ್ತಿ ಎತ್ತಿದಾಗ ಹಿಂದಿನಿಂದ
ರಂಗಪ್ರವೇಶಿಸಿದ ಖಾಜಿ)

ಖಾಜಿ-ಹುಜೂರ್...ನಿಲ್ಲಿಸಿರಿ!... (ತೈಮೂರ ಹಿಂತಿರುಗಿ ನೋಡುವನು)

ಖಾಜಿ-ಛಿ! ಛಿ! ನಿಮ್ಮ ಮಗಳಂತಿರುವ ಹೆಣ್ಣನ್ನು ಕೊಲ್ಲುವಿರಾ?...

ತೈಮೂರ-ಖಾಜಿಯವರೇ ಇವಳು ಹೆಣ್ಣಲ್ಲ...ಶೈತಾನಿ

ಖಾಜಿ-ಒಂದೇ ಕ್ಷಣದ ಮೊದಲು ಈ ಶೈತಾನಿ ಹೆಣ್ಣನ್ನೇ ಮದುವೆಯಾಗಲು
ಯೋಚಿಸಿದ್ದಿರಿ.

ತೈಮೂರ-ಹೌದು. ಈಗ ಆವಳ ರೂಪದ ನೆರಳಲ್ಲಿ ಅಡಗಿರುವ ದುಷ್ಟ ಮನಸ್ಸಿನ
ಪ್ರದರ್ಶನವಾಯಿತು. ಅವಳ ವಂಚನೆಯ ಸಂಚು ಹೊರಬಿತ್ತು. ಅವಳ
ಪಾಪೀ ಜೀವನ ಅಂತ್ಯವಾಗಲು ಗಳಿಗೆ ಬಂತು.

ಖಾಜಿ-ತಾವು ಈಗ ಸ್ವಲ್ಪ ಯೋಚಿಸಬೇಕಾಗಿದೆ ಹುಜೂರ್. ಇಲ್ಲಿ ತಾವು ಸಿಕ್ಕಿದ
ಹೆಣ್ಣುಗಳನ್ನು ಅತ್ಯಾಚಾರ ಮಾಡುತ್ತೀರಿ. ಒಲ್ಲದವರನ್ನು ಕೊಲ್ಲುತ್ತೀರಿ.
ಅಲ್ಲಿ ನಿಮ್ಮ ಅರಮನೆಯಲ್ಲಿ ಏನು ನಡೆದಿದೆ ಗೊತ್ತೇ ನಿಮಗೆ?

ತೈಮೂರ-ಅಲ್ಲೇನು ನಡೆದಿದೆ ಅಂತಹ ವಿಶೇಷ?

ಖಾಜಿ-ಅಲ್ಲಿ ಮಹಾಶಿಲ್ಪಿ ದಾವೂದನು ಮಸೀದಿ ನಿರ್ಮಿಸುವುದಲ್ಲ. ನಿಮ್ಮ
ಕುಟುಂಬ ಗೌರವಕ್ಕೆ ಸಮಾಧಿ ನಿರ್ಮಿಸುತ್ತಿದ್ದಾನೆ.

ತೈಮೂರ-ಆದೇನು ಒಗಟು ಮಾತಾಡುತ್ತಿದ್ದೀರಿ?

ಖಾಜಿ-ಹೌದು... ಶಿಲ್ಪಿಯ ಅವಶ್ಯಕತೆಗೆ ಬೇಕಾದ ಸಲಕರಣೆಗಳನ್ನು ನಿಮ್ಮ
ಬೇಗಮರು ಒದಗಿಸುತ್ತಿರುವುದಲ್ಲ. ಶಿಲ್ಪಿಯ ಬಾಯಾರಿಕೆಗೆ ಬೇಗಮರು
ತಮ್ಮನ್ನೇ ಅರ್ಪಿಸಿಬಿಟ್ಟಿದ್ದಾರೆ.

ತೈಮೂರ-(ಉದ್ರೇಕದಿಂದ) ಖಾಜೀಸಾಹೇಬ್... ಜೋಕೆ! ನಾಲಿಗೆ ಸೀಳಿಯೇನು!

ಖಾಜಿ-ಗೊತ್ತಿದೆ ಹುಜೂರ್ ನಿಮ್ಮ ಬೇಗಮರ ಮಹಲಿಗೆ ಶಿಲ್ಪಿ ಬಂದು ಹೋಗು

ತ್ತಿರುವುದು ಜಾಸ್ತಿಯಾಗಿದೆ—ಕೆಲ ದಿನ ರಾತ್ರಿ ಇಡೀ ಬೇಗಮರೊಂದಿಗೇ ಶಿಲ್ಪಿ ಇರುತ್ತಾನೆಂದು ಪ್ರಧಾನ ಮಂತ್ರಿಗಳು ಹೇಳಿಕಳುಹಿಸಿದ್ದಾರೆ. ಬಂದ ಜವಾನರು ತಮಗೆ ಆ ಸುದ್ದಿ ತಿಳಿಸಲು ಹೆದರಿ ಉಳಿದಿದ್ದಾರೆ.

ತೈಮೂರ–ಖಾಜೀ ಸಾಹೇಬ್!......................ಪ್ರಧಾನ ಮಂತ್ರಿಗಳು ಸುಳ್ಳಾಡಲಾರರು. ವಿಷಯದಲ್ಲಿ ಸತ್ಯವಿರಬೇಕು. ಆ ದಾವೂದನ ಬಗ್ಗೆ ಬೇಗಮಳ ಒಲವು ಹೆಚ್ಚಿದ್ದುದನ್ನು ನಾನೂ ಗಮನಿಸಿದ್ದೆ.

ಖಾಜಿ–ತಾವೂ ಗಮನಿಸಿದ್ದಿರೇ!?

ತೈಮೂ–ಹೌದು. ಆದರೆ ದಾವೂದನ ಶಿಲ್ಪ ಕಲೆಗೆ ಮೆಚ್ಚಿರಬೇಕೆಂದೂಹಿಸಿದ್ದೆ. ಈಗ ತಿಳಿಯಿತು, ಅವಳ ಮೆಚ್ಚುಗೆ. ಅವರಿಬ್ಬರನ್ನೂ ಒಂದೇ ಕತ್ತಿಯಿಂದ ತುಂಡರಿಸಿ ನಿರ್ಮಾಣವಾಗುತ್ತಿರುವ ಮಸೀದಿಯ ಮೆಟ್ಟಲಲ್ಲಿ ಹುಗಿಸುತ್ತೇನೆ.........ಸಜೀದ್...!

ಸಜೀದ್–ಹುಜೂರ್....

ತೈಮೂರ–ಕೂಡಲೇ ಯುದ್ಧ ನಿಲ್ಲಿಸಿ ಸೈನ್ಯ ಹಿಂತಿರುಗಿಸಲು ಉಪದಂಡನಾಯಕನಿಗೆ ತಿಳಿಸು. (ಸಜೀದ್ ಹೋಗುವನು)

ಖಾಜಿ–ತಾವು ಗಾಬರಿಯಾಗಬೇಡಿ ಹುಜೂರ್.

ತೈಮೂ–ಈ ತೈಮೂರ್ ಖಾನನು ಗಾಬರಿಯಾಗುವ ಘಟನೆಗಳೇ ಲೋಕದಲ್ಲಿ ನಡೆದಿಲ್ಲ ಖಾಜಿ ಸಾಹೇಬ್! ನಾನು ಕೂಡಲೇ ನಾಡಿಗೆ ತಲುಪಬೇಕಾಗಿದೆ. ಆ ನೀಚ ಬೇಗಮಳನ್ನು ಮುಗಿಸಬೇಕಾಗಿದೆ.... ಆ ದ್ರೋಹಿ ದಾವೂದನ ರುಂಡ ಉರುಳಿಸಬೇಕಾಗಿದೆ...ಇಡೀ ಭಾರತವನ್ನೇ ಗೆಲ್ಲಬೇಕೆನ್ನುವ ಮಹತ್ವಾಕಾಂಕ್ಷೆಯ ಚಿಗುರನ್ನು ಚಿವುಟಬೇಕಾಗಿದೆ.

(ಹೇಳುತಾ...ಹೇಳುತ್ತಾ ತಿರುಗಿ ನೋಡದೆ ಹೋಗಿಬಿಡುತ್ತಾನೆ. ಖಾಜಿ, ಮಧುಮತಿ, ಮಾಲಿನಿ, ಅಜಿತರು ಅವಾಕ್ಕಾಗಿ ನಿಂತಿರುತ್ತಾರೆ. ಮಧುಮತಿ ಖಾಜಿಯವರ ಹತ್ತಿರ ಹೋಗಿ ಮೊಣಕಾಲೂರಿ)

ಮಧು–ತಾತಾ....ಸರಿಯಾದ ಹೊತ್ತಿಗೆ ಬಂದಿರಿ. ನನ್ನ ಮಾನ–ಪ್ರಾಣವೆರಡನ್ನೂ ಉಳಿಸಿದಿರಿ.

ಖಾಜಿ–ಮಗಳೇ ಏಳಮ್ಮಾ...ಏಳು... ಎಂತಹ ಆಪತ್ತನ್ನೂ ಧೈರ್ಯದಿಂದ ಎದುರಿಸಿದ ನಿನ್ನ ಸಾಮರ್ಥ್ಯವೂ, ನಿನ್ನ ಬುದ್ಧಿವಂತಿಕೆಯೂ, ಭಗವಂತನ

ಕೃಪೆಯೂ ನಿನ್ನನ್ನು ರಕ್ಷಿಸಿತು. ಆ ನೀಚನು, ಅಲ್ಲಾನು ಮೆಚ್ಚದಂತಹ
ಕ್ರೂರ ಅನ್ಯಾಯಗಳನ್ನೇ ಮಾಡುತ್ತಿದ್ದಾನೆ. ನನ್ನಂತಹವರು ಹೇಳಿದ
ಅವನು ಕೇಳುವುದಿಲ್ಲ. ಈಗ ಅಲ್ಲಾನಿಗೆ ಕೋಪಬಂದಿರಬೇಕು
ಅನ್ಯಾಯಕ್ಕೆ ತಕ್ಕ ಶಿಕ್ಷೆ ಒದಗಿಸುತ್ತಾನೆ.

**ಅಜಿತ್**-ತಾತಾ....ಇನ್ನು ಯುದ್ಧ ಮಾಡಲಾರರೇ? ನಾಡನ್ನು ಕೊಳ್ಳೆಹೊಡೆಯ
ಲಾರರೇ?

**ಖಾಜಿ**-ಇಲ್ಲ ಮಗೂ....ಅವನೂ ಅವನ ಸೈನ್ಯವೂ ಹಿಂತಿರುಗತೊಡಗಿದೆ. ನಿಮ್ಮ
ರಾಜ್ಯವನ್ನು ನೀವು ಸುಖದಿಂದ ಆಳಬಹುದು. ಯಾವ ಆಕ್ರಮಣದ
ಹೆದರಿಕೆಯೂ ಇಲ್ಲ...ಅಲ್ಲಾನು ನಿಮ್ಮನ್ನು ರಕ್ಷಿಸಲಿ...ಸುಭಾನಲ್ಲಾ...
(ಹೋಗುವನು)

**ಮಧು**-ತಾತಾ...

**ಅಜಿತ್**-ಅಕ್ಕಾ ಶ್ರೀ ಭವಾನಿಯು, ನಮ್ಮನ್ನೂ ನಾಡನ್ನೂ ರಕ್ಷಿಸಿದಳು.

**ಮಧು**-ಹೌದು....ಆ ಜಗನ್ಮಾತೆಯೇ ರಕ್ಷಿಸಿದಳು. (ಮೇಲೆ ನೋಡಿ) ದೇವಿ
ನಿನ್ನ ಕೃಪೆ ಅಗಾಧವಾದುದು.

(ಇಲ್ಲಿ ದೇವೀ ಸ್ತುತಿ ಹಾಡಿಸಬಹುದು. ಹಾಡಿಸದೇ ಕೊನೆಗೊಳಿಸಲೂ
ಬಹುದು)

ಸಂಪೂರ್ಣ

**ಭಂಡಾರಿಯವರ ಇತರ ನಾಟಕಗಳು:-**

ತುಳು-(ಚಾರಿತ್ರಿಕಗಳು) ರಾಣಿ ಅಬ್ಬಕ್ಕ, ವಿಠ್ಠಲದ ವೀರವರ್ಮ,
ದುಗ್ಗಣ, ಧರ್ಮರಕ್ಷಣೆ, ಭೂತಾಳ ಪಾಂಡ್ಯ, ಕಲ್ಯಾಣಪ್ಪನ ಕಾ

(ಸಾಮಾಜಿಕಗಳು) ಕಣ್ಣಿತ್ತಿ ಕುರುಡೆ, ಮಣ್ಣ್‌ಗ್ ಲಡಾ್ಯ, ಮೊಗ್
ಪರಬ್ಬನ ಬೊಡೆದಿ, ಚೊಟ್ಟಿನ ಮದ್ಮೆ, ತೆರಿಯಂದಿ ತಪ್ಪು, ಮುಗ
ಬಂಗಾರ್ ಬಾಲೆ, ಹೆಚ್ಚಿಕಡಮೆ ಇತ್ಯಾದಿ. (ಯಾವುದೂ ಮು
ಲಿಲ್ಲ.) ನಾರದೆರೆ ವಕಾಲತ್, ಬಿನ್ನೆರೆ ಗಡಿಬಿಡಿ (ಅಚ್ಚಿನಲ್ಲಿದೆ.)

ಕನ್ನಡ-ಸೋದರಿ, ಯಮಲೋಕದಲ್ಲಿ ಅಪೀಲು, ಮರೆಯದ ಮಮತೆ,
( ಪ್ರಕಟವಾಗಿಲ್ಲ ) ಬೆಳವಡಿ ಮಲ್ಲಮ್ಮ, ಕೆಳದಿಯ
ನ್ಯಾಯಚತುರ ಜಹಾಂಗೀರ್, ಧರ್ಮನಿಷ್ಠ ಪ್ರತಾಪಸಿಂಹ ತಂತ
ಶಿವಾಜಿ, (ಮಕ್ಕಳ ಮಟ್ಟದ ಮೇಲಿನ ನಾಟಕಗಳು ಪ್ರಕಟವಾ

ಹರಾವೆ[illegible]